


ಕರ್ನಾಟಕ

ಸ್ಕೌಟ್ ಶತಮಾನೋತ್ಸವ - 2007




# ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

# Karnataka Scout & Guide

News Magazine


VOL. - 7 JANUARY - 2007 No. - 1


ಸನ್ಮಾನ್ಯ ಶ್ರೀ ಹನುಮಂತಪ್ಪ ಯ. ಆಲ್ಕೋಡ್, ಯುವಜನ ಸೇವೆ ಮತ್ತು ಕ್ರೀಡಾ ಸಚಿವರು, ಕರ್ನಾಟಕ ಸರ್ಕಾರ ಹಾಗೂ ಜಿಲ್ಲಾ ಉಸ್ತುವಾರಿ ಸಚಿವರು, ರಾಯಚೂರು ಇವರು ದಿನಾಂಕ 26-01-2007ರಂದು ಜರುಗಿದ 58ನೇ ಗಣರಾಜ್ಯ ದಿನಾಚರಣೆ ಶುಭಸಂದರ್ಭದಲ್ಲಿ ಮಾಸ್ಟರ್ ಹರೀಶ್ ಕುಮಾರ್‌ಗೆ ರಾಜ್ಯ ಪುರಸ್ಕಾರ ಪ್ರಶಸ್ತಿ ಪತ್ರ ನೀಡಿ ಸನ್ಮಾನಿಸಿದರು. ಶ್ರೀ ಪಾಪರೆಡ್ಡಿ, ಮಾನ್ಯ ಶಾಸಕರು, ರಾಯಚೂರು, ಶ್ರೀಮತಿ ರೂಪಾನಿರಂಜನ್‌ಬಾಳೆ, ಅಧ್ಯಕ್ಷರು, ಜಿಲ್ಲಾ ಪಂಚಾಯತ್, ರಾಯಚೂರು ಮತ್ತು ಶ್ರೀ ತುಷಾರ ಗಿರಿನಾಥ್, ಭಾ.ಆ.ಸೇ. ಜಿಲ್ಲಾಧಿಕಾರಿಗಳು, ರಾಯಚೂರು ಇವರುಗಳು ಸಮಾರಂಭದಲ್ಲಿ ಉಪಸ್ಥಿತರಿದ್ದರು.






ದಿನಾಂಕ 12 ಜನವರಿ 2007ರಂದು ವಿಧಾನಸೌಧ ಮುಂಭಾಗದಲ್ಲಿ ಜರುಗಿದ ರಾಷ್ಟ್ರೀಯ ಯುವ ದಿನಾಚರಣೆ ಹಾಗೂ ಸ್ವಾಮಿ ವಿವೇಕಾನಂದರ ಜನ್ಮದಿನಾಚರಣೆ ಪ್ರಯುಕ್ತ ಜರುಗಿದ ಪಥಚಲನವನ್ನು ರಾಜ್ಯದ ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಸಚಿವರಾದ ಮಾನ್ಯಶ್ರೀ ಬಸವರಾಜ ಹೊರಟ್ಟಿ ಉದ್ಘಾಟಿಸಿದರು. ಗೌರವಾನ್ವಿತ ಅತಿಥಿಯಾಗಿ ಭಾಗವಹಿಸಿದ ಯುವಜನ ಸೇವೆ ಮತ್ತು ಕ್ರೀಡಾ ಇಲಾಖೆ ಆಯುಕ್ತರಾದ ಶ್ರೀ ಕೆ.ಸಿ. ರಾಮಮೂರ್ತಿ ಹಾಗೂ ಜಂಟಿ ನಿರ್ದೇಶಕರಾದ ಶ್ರೀ ಆರ್.ಎಲ್. ಪಾಟೀಲ್, ಸಂಸ್ಥೆಯ ಉಪಾಧ್ಯಕ್ಷಿಣಿ ಶ್ರೀಮತಿ ಎಂ.ಜಿ. ಬೋಪಯ್ಯ, ಮಾಜಿ ಸಚಿವರಾದ ಶ್ರೀ ಪ್ರಭಾಕರ್ ರಾಣೆ ಮತ್ತು ಸಂಸ್ಥೆಯ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.



ಹನುಮಂತಪ್ಪ ಯ. ಆಲ್ಕೋಡ್
ಯುವಜನ ಸೇವೆ ಮತ್ತು ಕ್ರೀಡಾ ಸಚಿವರು

ಎಂವೈಎಸ್‌ಎಸ್/ಸಂದೇಶ/303/2007

" ಸುವರ್ಣ ಕರ್ನಾಟಕ "



ದೂರವಾಣಿ : 22253751
22033413
ಕೊಠಡಿ ಸಂಖ್ಯೆ 342, 3ನೇ ಮಹಡಿ,
ವಿಧಾನ ಸೌಧ,
ಬೆಂಗಳೂರು - 560 001

ದಿನಾಂಕ 06-02-2007

# ಸಂ ದೇ ಶ

ಯುವ ಜನಾಂಗವನ್ನು ರಚನಾತ್ಮಕ ಚಟುವಟಿಕೆಗಳಲ್ಲಿ ತೊಡಗಿಸುವ ಮೂಲಕ ಭವಿಷ್ಯದಲ್ಲಿ ಜವಾಬ್ದಾರಿಯುತ ಪ್ರಜೆಗಳನ್ನಾಗಿಸುವ ಮಹತ್ವದ ಕಾರ್ಯದಲ್ಲಿ ನಿರತವಾಗಿರುವ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಸೇವೆ ಅತ್ಯಂತ ಅವಶ್ಯಕವಾದದ್ದು.

ಜೀವನದಲ್ಲಿ ಶ್ರದ್ಧೆ, ಪ್ರೀತಿ, ಸಾಹಸ ಪ್ರಿಯತೆ, ಕ್ರಿಯಾಶೀಲತೆ ಮತ್ತು ಕ್ರೀಡಾ ಮನೋಭಾವ ರೂಪಿಸಬಲ್ಲ ಸಾಮರ್ಥ್ಯ ಈ ಚಳವಳಿಗಿದೆ. ನಮ್ಮ ಶಿಕ್ಷಣ ಹಾಗೂ ಸಮಾಜದ ಅವಿಭಾಜ್ಯ ಅಂಗವಾಗಿ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿ ಮೂಡಿಬರಬೇಕೆಂಬುದು ನನ್ನ ಆಶಯ.

ಶಿಸ್ತಿನ ಸಿಪಾಯಿಗಳನ್ನು ರೂಪಿಸುತ್ತಿರುವ ಈ ಚಳವಳಿಯಿಂದ ಸಮಾಜಕ್ಕೆ ಬಹುಮುಖ ಸೇವೆ ಸಲ್ಲುತ್ತಿದೆ. ಸಮುದಾಯ ಸೇವೆ, ಆರೋಗ್ಯ ಶಿಬಿರ, ಪರಿಸರ ಸಂರಕ್ಷಣೆ, ವನ ಸಂರಕ್ಷಣೆ, ಸಾಕ್ಷರತೆ, ನೈರ್ಮಲ್ಯ, ಏಡ್ಸ್‌ನಂತಹ ಮಾರಕ ರೋಗಗಳ ಬಗ್ಗೆ ಅರಿವು ಮೂಡಿಸುವಿಕೆ, ರಕ್ತದಾನ ಶಿಬಿರ ವ್ಯವಸ್ಥೆ ಮೊದಲಾದ ಸೇವಾ ಚಟುವಟಿಕೆಗಳಲ್ಲಿ ಕಬ್ಸ್ ಮತ್ತು ಬುಲ್ ಬುಲ್ಸ್, ಸ್ಕೌಟ್ಸ್ ಮತ್ತು ಗೈಡ್ಸ್ ಹಾಗೂ ರೋವರ್ಸ್ ಮತ್ತು ರೇಂಜರ್ಸ್ ವಿಭಾಗಗಳ ಪ್ರತಿನಿಧಿಗಳು ಸಕ್ರಿಯ ಸೇವೆ ಸಲ್ಲಿಸುತ್ತಿದ್ದಾರೆ.

ಸಂಸ್ಥೆಯ ಸ್ಥಾಪಕ ಲಾರ್ಡ್ ಬೇಡನ್ ಪೊವೆಲ್ ಅವರ ಆಶಯದಂತೆ ಸದಾ ಹರ್ಷಚಿತ್ತರಾಗಿ ಇತರರೂ ಹರ್ಷಚಿತ್ತರಾಗಿರುವಂತೆ ಶ್ರಮಿಸುತ್ತಿರುವ ಈ ಚಳವಳಿ ರಾಜ್ಯದೆಲ್ಲೆಡೆ ಹಬ್ಬಲೆಂದು ಹಾರೈಸುತ್ತೇನೆ.

(ಹನುಮಂತಪ್ಪ ಯ. ಆಲ್ಕೋಡ್)

ರಾಜ್ಯ ಮುಖ್ಯ ಆಯುಕ್ತರು,
ಭಾರತ್ ಸ್ಕೌಟ್ಸ್ ಅಂಡ್ ಗೈಡ್ಸ್
ಕರ್ನಾಟಕ ರಾಜ್ಯ,
ಕೋಟೆ, ಬೆಂಗಳೂರು-560002.




Vol - 7 January - 2007 No. 1



## ಪರಿವಿಡಿ



## ರಾಜ್ಯ ಸಂಸ್ಥೆಯ ಪದಾಧಿಕಾರಿಗಳು

| | |
|---|---|
| ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ | ರಾಜ್ಯ ಮುಖ್ಯ ಆಯುಕ್ತರು |
| ಶ್ರೀ ಸಿ.ಆರ್. ಮುಹಮ್ಮದ್ ಜಹಿರುದ್ದೀನ್ | ರಾಜ್ಯ ಆಯುಕ್ತರು (ಸ್ಕೌಟ್ಸ್) |
| ಶ್ರೀಮತಿ ಸರೋಜ ತುಳಸಿದಾಸ್ ದಾಸಪ್ಪ | ರಾಜ್ಯ ಆಯುಕ್ತರು (ಗೈಡ್ಸ್) |
| ಶ್ರೀ ಸುರೇಶ್ ಹೆಬ್ಳೀಕರ್ | ರಾಜ್ಯ ಕಾರ್ಯದರ್ಶಿ |
| ಶ್ರೀ ಟಿ. ಪ್ರಭಾಕರ್ | ರಾಜ್ಯ ಕೋಶಾಧಿಕಾರಿ |
| ಶ್ರೀಮತಿ ಗೀತಾ ನಟರಾಜ್ | ರಾಜ್ಯ ಜಂಟಿ ಕಾರ್ಯದರ್ಶಿ (ಗೈಡ್ಸ್) |
| ಶ್ರೀ ಎನ್. ಶ್ರೀನಿವಾಸನ್ | ರಾಜ್ಯ ಜಂಟಿ ಕಾರ್ಯದರ್ಶಿ (ಸ್ಕೌಟ್ಸ್) |

# ರಾಜ್ಯ ಮುಖ್ಯ ಆಯುಕ್ತರ ನುಡಿ.....................

ಮಾನ್ಯರೆ

ದಿನಾಂಕ 12-01-2007 ರಂದು ರಾಜ್ಯ ಕೇಂದ್ರ ಕಚೇರಿ ಆಯೋಜಿಸಿದ್ದ "ರಾಷ್ಟ್ರೀಯ ಯುವ ದಿನಾಚರಣೆ ಹಾಗೂ ಸ್ವಾಮಿ ವಿವೇಕಾನಂದ ಜನ್ಮ ದಿನಾಚರಣೆ" ಅಂಗವಾಗಿ ವಿಧಾನಸೌಧ ಮುಂಭಾಗದಿಂದ ಪ್ರಾರಂಭವಾದ ಪಥಚಲನವನ್ನು ಸಮಾರಂಭದ ಮುಖ್ಯ ಅತಿಥಿಗಳಾಗಿ ಆಗಮಿಸಿದ ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಸಚಿವರಾದ ಶ್ರೀ ಬಸವರಾಜ ಹೊರಟ್ಟಿ ಅವರು ಹಸಿರು ನಿಶಾನೆ ತೋರಿಸಿ ಉದ್ಘಾಟಿಸಿದರು. ಯುವಜನ ಸೇವೆ ಮತ್ತು ಕ್ರೀಡಾ ಇಲಾಖೆ ಆಯುಕ್ತರಾದ ಶ್ರೀ ಕೆ.ಸಿ. ರಾಮಮೂರ್ತಿ ಅವರು ವಿಶೇಷ ಅತಿಥಿಗಳಾಗಿ ಭಾಗವಹಿಸಿದರು. ಸನ್ಮಾನ್ಯ ಸಚಿವರು ಸ್ಕೌಟ್ಸ್-ಗೈಡ್ಸ್ ಚಳವಳಿ ಬೆಳವಣಿಗೆಗೆ ಇಲಾಖೆಯ ಸಂಪೂರ್ಣ ನೆರವು ಸದಾ ಇರುವುದಾಗಿ ಭರವಸೆ ನೀಡಿದರು. ಆಯುಕ್ತರಾದ ಶ್ರೀ ಕೆ.ಸಿ. ರಾಮಮೂರ್ತಿಯವರು ಮಕ್ಕಳನ್ನು ಹರಸಿದರು. ಮಾಜಿ ಸಚಿವರಾದ ಶ್ರೀ ಪ್ರಭಾಕರ್ ರಾಣೆ ಹಾಗೂ ಇಲಾಖೆಯ ಜಂಟಿ ನಿರ್ದೇಶಕ ಶ್ರೀ ಆರ್.ಎಲ್. ಪಾಟೀಲ್ ಹಾಗೂ ಸಂಸ್ಥೆಯ ಹಿರಿಯ ಉಪಾಧ್ಯಕ್ಷಿಣಿ ಶ್ರೀಮತಿ ಎಂ.ಜಿ. ಬೋಪಯ್ಯ ಹಾಗೂ ಇತರ ಪದಾಧಿಕಾರಿಗಳು, ಕಾರ್ಯಕರ್ತರುಗಳು, 600 ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್ ಹಾಗು ವಿವಿಧ ಹಂತದ ನಾಯಕರುಗಳು ಪಥಚಲನದಲ್ಲಿ ವಿವಿಧ ಭಿತ್ತಿ ಫಲಕಗಳೊಂದಿಗೆ ಭಾಗವಹಿಸಿ ಸಾರ್ವಜನಿಕರ ಗಮನ ಸೆಳೆದರು.

ಬೆಳಿಗ್ಗೆಯಿಂದ ಸಂಜೆಯವರೆಗೆ ಶಾಂತಿಗೃಹ ತರಬೇತಿ ಕೇಂದ್ರದಲ್ಲಿ ನಡೆದ ಚಿತ್ರರಚನೆ, ಪ್ರಬಂಧ ಸ್ಪರ್ಧೆ, ರಸಪ್ರಶ್ನೆ, ಯುವವೇದಿಕೆ, ಭಾಷಣ ಸ್ಪರ್ಧೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದ ಎಲ್ಲಾ ಸ್ಕೌಟ್ಸ್-ಗೈಡ್ಸ್‌ಗಳು ತಮ್ಮ ವ್ಯಕ್ತಿತ್ವದ ವಿವಿಧ ಮುಖಗಳನ್ನು ಪರಿಚಯ ಮಾಡಿಕೊಂಡು, ಅತ್ಯಂತ ಉತ್ಸಾಹದಿಂದ ರಾಷ್ಟ್ರದ ಹೆಮ್ಮೆಯ ಪುತ್ರ ಸ್ವಾಮಿ ವಿವೇಕಾನಂದರ ಜನ್ಮ ದಿನಾಚರಣೆ ಆಚರಿಸಿದರು. ಸಂಜೆ ಜರುಗಿದ ಮುಕ್ತಾಯ ಸಮಾರಂಭದಲ್ಲಿ ಭಾಗವಹಿಸಿದ ಯುವಜನ ಸೇವೆ ಮತ್ತು ಕ್ರೀಡಾ ಇಲಾಖೆಯ ಜಂಟಿ ನಿರ್ದೇಶಕರಾದ ಶ್ರೀ ವಸಂತ ಕೆ. ಗುಡೋಡಗಿ ಅತಿಥಿಯಾಗಿ ಭಾಗವಹಿಸಿ ಸ್ಕೌಟ್-ಗೈಡ್ ಚಳವಳಿ ಹೆಚ್ಚಾಗಲೆಂದು ಆಶಿಸಿದರು.

ನವೆಂಬರ್ 29, 2006ರಂದು ನವದೆಹಲಿಯಲ್ಲಿ ಜರುಗಿದ 56ನೇಯ ರಾಷ್ಟ್ರೀಯ ಮಂಡಳಿ ಸಭೆಯಲ್ಲಿ ನಮ್ಮ ರಾಜ್ಯಕ್ಕೆ 2005-2006ನೆಯ ಸಾಲಿನ "ಕಬ್-ಬುಲ್‌ಗಳ ಸಂಖ್ಯೆಯ ಹೆಚ್ಚಳಕ್ಕಾಗಿ" ರಾಷ್ಟ್ರೀಯ ಆಯುಕ್ತರು ಪಾರಿತೋಷಕ ಹಾಗೂ ಪ್ರಶಸ್ತಿ ಪತ್ರ ನೀಡಿ ಗೌರವಿಸಿರುತ್ತಾರೆ.

2007 ಜನವರಿ 1 ರಿಂದ 7ರ ವರೆವಿಗೆ ಪಶ್ಚಿಮ ಬಂಗಳಾದ ರಾಜರಾತ್‌ನಲ್ಲಿ ಜರುಗಿದ ಸ್ಕೌಟ್ ಶತಮಾನೋತ್ಸವ ವಿಶೇಷ ಜಾಂಬೋರಿಯಲ್ಲಿ ರಾಜ್ಯದಿಂದ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಜಾಂಬೋರಿಯಲ್ಲಿ ಜರುಗಿದ ಕೆಳಕಂಡ ಸ್ಪರ್ಧೆಗಳಲ್ಲಿ ಭಾಗವಹಿಸಿದ ನಮ್ಮ ಸ್ಕೌಟ್ ಗೈಡ್‌ಗಳು ಹಲವಾರು ಪ್ರಶಸ್ತಿಗಳಿಸಿ ರಾಜ್ಯಕ್ಕೆ ಗೌರವತಂದಿದ್ದಾರೆ.

ಅವುಗಳ ವಿವರ ಕೆಳಕಂಡಂತಿವೆ : ಪರಂಪರೆ ಪ್ರದರ್ಶನ 'ಎ' ಶ್ರೇಣಿ, ಕೌಶಲ ಪ್ರದರ್ಶನ 'ಬಿ' ಶ್ರೇಣಿ, ಪಥಸಂಚಲನ 'ಬಿ' ಶ್ರೇಣಿ, ಅಗ್ರಗಾಮಿತ್ವ 'ಬಿ' ಶ್ರೇಣಿ.

ಈ ತಿಂಗಳಲ್ಲಿ ರಾಜ್ಯದ ಹಲವಾರು ಜಿಲ್ಲೆಗಳಲ್ಲಿ ಕಬ್-ಬುಲ್‌ಬುಲ್ ಮೇಳಗಳು, ಸ್ಕೌಟ್-ಗೈಡ್ ರ‍್ಯಾಲಿಗಳು, ಮೂಲ ಹಾಗೂ ಮುಂದುವರೆದ ತರಬೇತಿ ಶಿಬಿರಗಳನ್ನು ಆಯೋಜಿಸಿದ್ದು ರಾಜ್ಯ ಸಂಸ್ಥೆಯ ಹಲವಾರು ಪ್ರತಿನಿಧಿಗಳು ಇವುಗಳಲ್ಲಿ ಭಾಗವಹಿಸುತ್ತಿದ್ದಾರೆ. ಬಳ್ಳಾರಿ ಜಿಲ್ಲೆ ದಿನಾಂಕ 28 ರಂದು ಏರ್ಪಡಿಸಿದ್ದ ಕಬ್-ಬುಲ್ ಉತ್ಸವದಲ್ಲಿ ನಾನು ಭಾಗವಹಿಸಿದ್ದೆ. ಬಳ್ಳಾರಿ ಸಂಸತ್ ಸದಸ್ಯರಾದ ಶ್ರೀ ಜಿ. ಕರುಣಾಕರರೆಡ್ಡಿ ಮುಖ್ಯ ಅತಿಥಿಯಾಗಿ ಉತ್ಸವದಲ್ಲಿ ಭಾಗವಹಿಸಿ **"ಸ್ಕೌಟ್-ಗೈಡ್ ಭವನದ ಎರಡನೇ ಮಹಡಿ ಶತಮಾನೋತ್ಸವ ಸ್ಕೌಟ್ ಭವನಕ್ಕೆ"** ಸಂಸದರ ನಿಧಿಯಿಂದ ಸಂಪೂರ್ಣ ನೆರವು ನೀಡುವುದಾಗಿ ಭರವಸೆ ನೀಡಿದರು.

ಮೈಸೂರು, ಬೆಳಗಾಂ ಹಾಗೂ ಬೆಂಗಳೂರು ವಿಭಾಗಗಳ ಸಹಾಯಕ ಜಿಲ್ಲಾ ಆಯುಕ್ತರುಗಳ ಹಾಗೂ ಸ್ಥಳೀಯ ಸಂಸ್ಥೆಗಳ ಕಾರ್ಯದರ್ಶಿ, ಕೋಶಾಧಿಕಾರಿಗಳ ಸಮ್ಮೇಳನಗಳು ಮೈಸೂರು ನಗರ, ಇಡಗುಂಜಿ - ಹೊನ್ನಾವರ, ಉತ್ತರ ಕನ್ನಡ ಹಾಗೂ ಬೆಂಗಳೂರು ಕೇಂದ್ರ ಕಾರ್ಯಾಲಯದಲ್ಲಿ ಜರುಗಿರುತ್ತದೆ. ಸ್ಥಳೀಯ ಸಂಸ್ಥೆ ಹಂತದಲ್ಲಿ ಚಳವಳಿ ಹೆಚ್ಚಿಸುವಲ್ಲಿ ಅವರುಗಳು ನಿರ್ವಹಿಸಬೇಕಾದ ಪಾತ್ರ ಹಾಗೂ ಕರ್ತವ್ಯಗಳ ಬಗ್ಗೆ ಹೆಚ್ಚು ಒತ್ತು ನೀಡಲಾಗಿದೆ.

ರಾಜ್ಯದ ಎಲ್ಲಾ ಘಟಕಗಳು, ಮುಕ್ತದಳಗಳು, ಸ್ಥಳೀಯ ಹಾಗೂ ಜಿಲ್ಲಾ ಸಂಸ್ಥೆಗಳು, ಎಲ್ಲಾ ಹಂತದ ಪದಾಧಿಕಾರಿಗಳು ಹಾಗೂ ಕಾರ್ಯಕರ್ತರುಗಳಲ್ಲಿ ನನ್ನ ಮನವಿ. ತಾವುಗಳು ಸ್ಕೌಟ್ ಶತಮಾನೋತ್ಸವ ವರ್ಷದಲ್ಲಿ (2007) ತಮ್ಮ ಘಟಕ , ದಳ, ಸ್ಥಳೀಯ ಹಾಗೂ ಜಿಲ್ಲಾ ಸಂಸ್ಥೆಗಳಲ್ಲಿ - ಸಾರ್ವಜನಿಕ ಸೇವೆಗೆ ಸದಾ ತಯಾರಾಗಿರುವ, ಮತ್ತೊಬ್ಬರಿಗೆ ನೆರವಾಗಲು ಸಿದ್ಧರಿರುವ, ತನಗೆ ದೊರೆತಿರುವ ಅವಕಾಶವನ್ನು ಅವಕಾಶವಿಲ್ಲದವರೊಂದಿಗೆ ಹಂಚಿಕೊಳ್ಳಲು ಸಿದ್ಧರಿರುವ, ಸಹಾಯ ಮಾಡಲು ಅಸಾಧ್ಯವಾದಲ್ಲಿ ಮತ್ತೊಬ್ಬರಿಗೆ ಅನಾನುಕೂಲವಾಗದಂತೆ ನಡೆಯುವ ನಿಷ್ಕಲಂಕ ಮನಸ್ಸಿನ ಯುವಕ ಯುವತಿಯರ ಪಡೆಯನ್ನು ನಿರ್ಮಿಸುವಲ್ಲಿ ಸಕ್ರಿಯವಾಗಿ ಪ್ರಯತ್ನಿಸಿ ಎಂದು ಕೋರುತ್ತೇನೆ. ಸ್ವಾತಂತ್ರ ಬಂದು ಆರು ದಶಕಗಳ ನಂತರವೂ ಅನ್ನ, ಬಟ್ಟೆ, ವಿದ್ಯೆ-ಸೂರು ಇಂದಿಗೂ ನಮ್ಮ ನಾಡಿನಲ್ಲಿ ಅವಶ್ಯಕ ವಸ್ತುಗಳಾಗಿ ಉಳಿದಿದ್ದು, ಇವುಗಳನ್ನು ಸಮಾಜದ ವಿವಿಧ ಸಮೂಹಗಳಿಂದ ಬಂದಿರುವ ಸಹಸ್ರಾರು ಜನರಿಗೆ ಸರ್ಕಾರದ ವಿವಿಧ ಯೋಜನೆಗಳ ಮುಖೇನ ತಲುಪಿಸುವ ಸಾಮಾಜಿಕ ಜವಾಬ್ದಾರಿ ಕೂಡ ನಮ್ಮಗಳೆಲ್ಲರ ಮೇಲಿದೆ.

ಮುಂದಿನ 13 ವರ್ಷಗಳಲ್ಲಿ, 2020ರ ಹೊತ್ತಿಗೆ. ಭಾರತ ಪ್ರಪಂಚದ ಇತರ ಅಗ್ರ ರಾಷ್ಟ್ರಗಳೊಂದಿಗೆ ಮುಂಚೂಣಿಯಲ್ಲಿರಬೇಕೆಂಬ, ನಮ್ಮೆಲ್ಲರ ನೆಚ್ಚಿನ ರಾಷ್ಟ್ರಪತಿ ಭಾರತರತ್ನ ಡಾ. ಎ.ಪಿ.ಜೆ. ಅಬ್ದುಲ್ ಕಲಾಂ ಅವರ ಕನಸನ್ನು ನನಸಾಗಿಸುವಲ್ಲಿ ಕರ್ನಾಟಕ ಹಾಗೂ ಭಾರತದ 38 ಲಕ್ಷಕ್ಕೂ ಮೀರಿದ ಸ್ಕೌಟ್ಸ್ ಗೈಡ್ಸ್‌ಗಳು ತಮ್ಮ ಪಾಲಿನ ಕರ್ತವ್ಯ ಹಾಗೂ ಜವಾಬ್ದಾರಿಯನ್ನು ನಿಷ್ಠೆ ಮತ್ತು ಪ್ರಾಮಾಣಿಕತೆಯಿಂದ ನಿರ್ವಹಿಸುವಲ್ಲಿ ದಯಾಮಯನಾದ ಭಗವಂತನ ಕೃಪೆ ಸದಾ ನಮ್ಮೆಲ್ಲರ ಮೇಲಿರಲೆಂದು ಪ್ರಾರ್ಥಿಸುತ್ತೇನೆ.

ಒಬ್ಬ ಸ್ಕೌಟ್-ಗೈಡ್ ಆಗಿ, ಕಬ್, ಬುಲ್‌ಬುಲ್ ಆಗಿ, ರೋವರ್-ರೇಂಜರ್, ಸ್ಕೌಟ್ ಮಾಸ್ಟರ್-ಗೈಡ್ ಕ್ಯಾಪ್ಟನ್ ಆಗಿ, ತರಬೇತಿ ನಾಯಕ, ನಾಯಕಿಯಾಗಿ, ವಿವಿಧ ಹಂತದ ಚಳವಳಿಯ ಕಾರ್ಯಕರ್ತನಾಗಿ, ನಾನು ನನ್ನ ಕರ್ತವ್ಯ ಮತ್ತು ಹೊಣೆಗಾರಿಕೆಯನ್ನು ನಿರ್ವಹಿಸಿರುವನೆಂಬ ಆತ್ಮತೃಪ್ತಿ ನಮ್ಮಲ್ಲಿ ಉಂಟಾಗುವಂತೆ ಕರುಣಿಸಲೆಂದು, ನಾವಾರು ಇದುವರೆಗೆ ಕಂಡಿರಿದ, ಆದರೂ ನಂಬಿರುವ ಸರ್ವಶಕ್ತನಾದ ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

2007 ಸ್ಕೌಟ್ಸ್ ಚಳವಳಿಯ ಶತಮಾನೋತ್ಸವ ಸಂಭ್ರಮದ ವರ್ಷ. ಮತ್ತೊಂದು ಶತಮಾನದ ಹೊತ್ತಿಗೆ ಹೊಸ ಪೀಳಿಗೆಯ ಯುವಕ ಯುವತಿಯರು - ಚಳವಳಿಯ ನಾಯಕರುಗಳಾಗಿ ಮುನ್ನಡೆಸುತ್ತಿರುತ್ತಾರೆ. ನಾವೆಲ್ಲಾ ನಿರ್ಗಮಿಸಿರುತ್ತೇವೆ. ಆದುದರಿಂದ ನಾವು ಯುವಜನಾಂಗಕ್ಕೆ ಉತ್ತಮ ಮಾರ್ಗದರ್ಶನ ನೀಡಿ, ಚಳವಳಿಯ ಆದರ್ಶ ತತ್ವಗಳನ್ನು ಮೈಗೂಡಿಸಿಕೊಂಡು ಹೆಚ್ಚಿನ ಆತ್ಮವಿಶ್ವಾಸ, ನಂಬಿಕೆ ಮೂಡಿಸುವಲ್ಲಿ ಯಶಸ್ವಿಯಾಗೋಣ ಎಂದು ಆಶಿಸುತ್ತೇನೆ.

ಹೊಸ ವರ್ಷದ ಹಾರ್ದಿಕ ಸ್ಕೌಟ್-ಗೈಡ್ ಶುಭಾಶಯಗಳೊಂದಿಗೆ,

ತಮ್ಮ ವಿಶ್ವಾಸಿ

ಕೊಂಡಜ್ಜಿ ಬ. ಷಣ್ಮುಖಪ್ಪ




# ರಾಷ್ಟ್ರೀಯ ಯುವ ದಿನಾಚರಣೆ ಹಾಗೂ ಸ್ವಾಮಿ ವಿವೇಕಾನಂದ ಜಯಂತಿ

ದಿನಾಂಕ 12-01-2007 ರಂದು ರಾಷ್ಟ್ರೀಯ ಯುವ ದಿನಾಚರಣೆ ಮತ್ತು ಸ್ವಾಮಿ ವಿವೇಕಾನಂದ ಜಯಂತಿಯನ್ನು ರಾಜ್ಯ ಸಂಸ್ಥೆ ಆಶ್ರಯದಲ್ಲಿ ಆಚರಿಸಲಾಯಿತು.

ಇದರ ಅಂಗವಾಗಿ ಬೆಳಗ್ಗೆ 9-00 ಗಂಟೆಗೆ ವಿಧಾನಸೌಧ ಪೂರ್ವದ್ವಾರದ ಬಳಿ ಪಥಚಲನೆಯ ಉದ್ಘಾಟನೆಯನ್ನು ಶ್ರೀ ಬಸವರಾಜ ಹೊರಟ್ಟಿ, ಮಾನ್ಯ ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಸಚಿವರು, ಕರ್ನಾಟಕ ಸರ್ಕಾರ ಇವರು ಹಸಿರು ನಿಶಾನೆ ತೋರಿಸುವ ಮೂಲಕ ನೆರವೇರಿಸಿದರು. ಈ ಸಂದರ್ಭದಲ್ಲಿ ಅವರು ಮಾತನಾಡುತ್ತಾ ಸ್ಕೌಟ್-ಗೈಡ್‌ಗಳ ಕಾರ್ಯಕ್ರಮಗಳನ್ನು ಪ್ರಶಂಸಿಸಿದರು ಮತ್ತು ರಾಜ್ಯದಲ್ಲಿ ಸ್ಕೌಟಿಂಗ್, ಗೈಡಿಂಗ್ ಕಾರ್ಯಕ್ರಮಕ್ಕೆ ಅಗತ್ಯವಿರುವ ಎಲ್ಲಾ ನೆರವನ್ನು ನೀಡುವುದಾಗಿ ತಿಳಿಸಿದರು. ಮಾಜಿ ಸಚಿವರಾದ ಶ್ರೀ ಪ್ರಭಾಕರ್ ರಾಣೆಯವರು, ಯುವಜನ ಸೇವೆ ಮತ್ತು ಕ್ರೀಡಾ ಇಲಾಖೆಯ ಆಯುಕ್ತರಾದ ಶ್ರೀ ಕೆ.ಸಿ. ರಾಮಮೂರ್ತಿಯವರು ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು. ಯುವ ಜನ ಸೇವೆ ಮತ್ತು ಕ್ರೀಡಾ ಇಲಾಖೆಯ ಜಂಟಿ ನಿರ್ದೇಶಕರಾದ ಶ್ರೀ ಆರ್.ಎಲ್. ಪಾಟೀಲ್, ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಸಂಸ್ಥೆ ಉಪಾಧ್ಯಕ್ಷರಾದ ಶ್ರೀಮತಿ ಎಂ.ಜಿ. ಬೋಪಯ್ಯ ನವರು, ರಾಜ್ಯ ಸಂಸ್ಥೆ ಪದಾಧಿಕಾರಿಗಳು, ರಾಜ್ಯಕೋಶಾಧಿಕಾರಿ ಶ್ರೀ ಟಿ. ಪ್ರಭಾಕರ್, ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು, ಸ್ಕೌಟ್ ಶಿಕ್ಷಕ ಗೈಡ್ ಶಿಕ್ಷಕಿಯರು ಈ ಸಂದರ್ಭದಲ್ಲಿ ಹಾಜರಿದ್ದರು. ಬೆಂಗಳೂರು ಉತ್ತರ ಜಿಲ್ಲೆ ಹಾಗೂ ಬೆಂಗಳೂರು ದಕ್ಷಿಣ ಜಿಲ್ಲೆಗಳಿಂದ 600ಕ್ಕೂ ಹೆಚ್ಚು ಸ್ಕೌಟ್-ಗೈಡ್‌ಗಳು, ರೋವರ್-ರೇಂಜರ್‌ಗಳು ಈ ಪಥಚಲನದಲ್ಲಿ ಪಾಲ್ಗೊಂಡಿದ್ದರು. ಶಾಂತಿ ಗೃಹದ ಆವರಣದಲ್ಲಿ ಪ್ರಾರ್ಥನೆ ಧ್ವಜಾರೋಹಣದ ನಂತರ ಈ ಕೆಳಕಂಡ ಸ್ಪರ್ಧೆಗಳನ್ನು ನಡೆಸಲಾಯಿತು. 1) ಭಾಷಣ ಸ್ಪರ್ಧೆ, 2) ಪ್ರಬಂಧ ಸ್ಪರ್ಧೆ, 3) ಚಿತ್ರಕಲಾ ಸ್ಪರ್ಧೆ, 4) ರಸಪ್ರಶ್ನೆ.

ಇದರೊಂದಿಗೆ ರೋವರ್-ರೇಂಜರ್‌ಗಳಿಗಾಗಿ ಯುವ ವೇದಿಕೆಯನ್ನು ಸಹ ಹಮ್ಮಿಕೊಳ್ಳಲಾಗಿತ್ತು. ಈ ಎಲ್ಲಾ ಸ್ಪರ್ಧೆಗಳೂ ಸಹ ಸ್ವಾಮಿವಿವೇಕಾನಂದರ ಜೀವನ, ಯುವ ಜನತೆಯ ಪಾತ್ರ, ಸಮುದಾಯ ಕಾರ್ಯಕ್ರಮ, ಪರಿಸರ, ಮುಂತಾದ ವಿಷಯಗಳನ್ನು ಒಳಗೊಂಡಿದ್ದವು. ಸ್ಪರ್ಧೆಗಳಲ್ಲಿ ವಿಜೇತರಾದವರಿಗೆ ಬಹುಮಾನಗಳನ್ನು ನೀಡಲಾಯಿತು.

ಸಂಜೆ ನಡೆದ ಮುಕ್ತಾಯ ಸಮಾರಂಭದಲ್ಲಿ, ಯುವಜನ ಸೇವೆ ಮತ್ತು ಕ್ರೀಡಾ ಇಲಾಖೆಯ ಜಂಟಿ ನಿರ್ದೇಶಕರಾದ ಶ್ರೀ ವಿ.ಕೆ. ಗುಡೋಡಗಿಯವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಅವರು ಮಾತನಾಡುತ್ತಾ ಸ್ವಾಮಿವಿವೇಕಾನಂದರ ಜೀವನದ ಮುಖ್ಯ ಘಟನೆಗಳ ಬಗ್ಗೆ ಉಲ್ಲೇಖಿಸಿ ಅವರ ಆದರ್ಶಗಳನ್ನು ಸ್ಕೌಟ್ ಗೈಡ್‌ಗಳು ಪಾಲಿಸಬೇಕೆಂದು ಕರೆ ಇತ್ತರು. ರಾಜ್ಯದಲ್ಲಿ ಸ್ಕೌಟ್-ಗೈಡ್ ಚಟುವಟಿಕೆಗಳಿಗೆ ಇಲಾಖೆಯಿಂದ ನೀಡಬಹುದಾದ ಎಲ್ಲಾ ರೀತಿಯ ಸಹಕಾರವನ್ನು ನೀಡುವುದಾಗಿ ತಿಳಿಸಿದರು.

ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಸಂಸ್ಥೆ ಉಪಾಧ್ಯಕ್ಷೆ ಶ್ರೀಮತಿ ಎಂ.ಜಿ. ಬೋಪಯ್ಯ, ರಾಜ್ಯ ಸಂಸ್ಥೆ

ಪದಾಧಿಕಾರಿಗಳು, ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಮತ್ತು ದಕ್ಷಿಣ ಪ್ರಾಂತೀಯ ಕಛೇರಿಯ ಸಹ ನಿರ್ದೇಶಕರಾದ ಶ್ರೀಮತಿ ಸುಮನ್‌ಲತ, ಪ್ರಾಂತೀಯ ಸಂಘಟನಾ ಆಯುಕ್ತರಾದ ಶ್ರೀ ಅರೂಪ್ ಸರ್ಕಾರ್ ಇವರುಗಳು ಉಪಸ್ಥಿತರಿದ್ದರು. ಈ ಕಾರ್ಯಕ್ರಮದಲ್ಲಿ ಪಾಲ್ಗೊಂಡವರಿಗೆ ಪ್ರಮಾಣಪತ್ರ ನೀಡಲಾಯಿತು.

ಯುವಜನ ಸೇವೆ ಮತ್ತು ಕ್ರೀಡಾ ಇಲಾಖೆ ಯವನಿಕಾದಲ್ಲಿ ಏರ್ಪಡಿಸಿದ್ದ ಯುವ ಸಮಾವೇಶದಲ್ಲಿ 250ಕ್ಕೂ ಹೆಚ್ಚು ಸ್ಕೌಟ್ ಗೈಡ್‌ಗಳು ಭಾಗವಹಿಸಿದ್ದರು.

ಶ್ರೀ ಎನ್. ಶ್ರೀನಿವಾಸನ್, ಜಂಟಿ ರಾಜ್ಯ ಕಾರ್ಯದರ್ಶಿ, ಶ್ರೀ ಕೆ. ತಿಮ್ಮಪ್ಪ, ಕೇಂದ್ರ ಸ್ಥಾನಿಕ ಆಯುಕ್ತರು (ತರಬೇತಿ). ಶ್ರೀಮತಿ ರವಿವೆಸ್ಲಿ, ಕೇಂದ್ರ ಸ್ಥಾನಿಕ ಆಯುಕ್ತರು (ಯೋಜನೆ) (ಗೈ), ಶ್ರೀ ನಾರಾಯಣ ಶೆಟ್ಟಿ, ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್), ಶ್ರೀ ಮಾಧವ ಸಿಂಗ್, ರಾಜ್ಯ ತರಬೇತಿ ಆಯುಕ್ತ (ಸ್ಕೌಟ್ಸ್), ಶ್ರೀಮತಿ ಎಸ್.ಕೆ. ಪ್ರಭಾ, ಎಲ್.ಟಿ. (ಗೈ) ಶ್ರೀ ಎಂ. ಶ್ರೀನಿವಾಸ್, ಶ್ರೀ ಪ್ರೇಮ್ ಕುಮಾರ್, ಜಿಲ್ಲಾ ಆಯುಕ್ತರು (ಸ್ಕೌಟ್ಸ್), ಶ್ರೀ ಬಿ.ಕೆ. ಶೇಷಾದ್ರಿ, ಜಿಲ್ಲಾ ಕಾರ್ಯದರ್ಶಿ, ಬೆಂಗಳೂರು ಉತ್ತರ ಜಿಲ್ಲೆ, ಶ್ರೀ ಪಿ. ಪಳನಿ, ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಬೆಂಗಳೂರು ದಕ್ಷಿಣ , ಶ್ರೀಮತಿ ಸುಶೀಲ ಗೋಪಾಲ್, ಕೇಂದ್ರ ಸ್ಥಾನಿಕ ಆಯುಕ್ತರು (ಗೈಡ್ಸ್) ಹಾಗೂ ಸ್ಕೌಟರ್, ಗೈಡರುಗಳು ಇವರೆಲ್ಲರ ಸಹಾಯ ಸಹಕಾರದಿಂದ ಕಾರ್ಯಕ್ರಮಗಳು ಯಶಸ್ವಿಯಾಗಿ ಜರುಗಿತು.

## ವಿಶೇಷ ಸ್ಕೌಟ್ ಶತಮಾನೋತ್ಸವ ರಾಷ್ಟ್ರೀಯ ಜಾಂಬೂರಿ - ಕೋಲ್ಕತ್ತಾ

ದಿನಾಂಕ 1-1-2007 ರಿಂದ 8-1-1007ರ ವರೆಗೆ ಕೋಲ್ಕತ್ತಾ ರಾಜ್ಯ ರಾಜರಾತ್‌ನಲ್ಲಿ ನಡೆದ ವಿಶೇಷ ರಾಷ್ಟೀಯ ಜಾಂಬೂರಿಯಲ್ಲಿ ಕರ್ನಾಟಕ ರಾಜ್ಯದಿಂದ 740-ಸ್ಕೌಟ್ಸ್, 402-ಗೈಡ್ಸ್, 162-ಸ್ಕೌಟರ್ಸ್, 52-ಗೈಡರ್ಸ್, 26-ಸಿಬ್ಬಂದಿ, 24-ರೋವರ್ಸ್ / ರೇಂಜರ್ಸ್ ಒಟ್ಟು 1,406 ಮಂದಿ ಭಾಗವಹಿಸಿದ್ದರು.

ಸ್ಕೌಟ್ ತಂಡದ ನಾಯಕರಾಗಿ ಡಾ॥ ಹೆಚ್. ಭರಶೆಟ್ಟಿ, ಜಿಲ್ಲಾ ಸಂಘಟನಾ ಆಯುಕ್ತರು, ಬೀದರ್. ಗೈಡ್ ತಂಡದ ನಾಯಕಿಯಾಗಿ ಶ್ರೀಮತಿ ಎನ್.ಕೆ. ಛಾಯ, ಎಲ್.ಟಿ. (ಗೈಡ್ಸ್) ತುಮಕೂರು ಕಾರ್ಯನಿರ್ವಹಿಸಿದರು.

ಜಾಂಬೂರಿಯಲ್ಲಿ ಹಮ್ಮಿಕೊಳ್ಳಲಾಗಿದ್ದ ಎಲ್ಲಾ ಕಾರ್ಯಕ್ರಮಗಳಲ್ಲಿ ಹಾಗೂ ಸ್ಪರ್ಧೆಗಳಲ್ಲಿ ರಾಜ್ಯದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಭಾಗವಹಿಸಿ, ಕೆಳಕಂಡಂತೆ ಶ್ರೇಣಿ ಪಡೆದಿರುತ್ತಾರೆ.

| | | |
|---|---|---|
| (1) | ಪರಂಪರೆ, ಪ್ರದರ್ಶನ, | "ಎ" ಶ್ರೇಣಿ |
| (2) | ಪಥಸಂಚಲನ | "ಬಿ" ಶ್ರೇಣಿ |
| (3) | ಕೌಶಲ ಪ್ರದರ್ಶನ | "ಬಿ" ಶ್ರೇಣಿ |
| (4) | ಅಗ್ರಗಾಮಿತ್ವ. | "ಬಿ" ಶ್ರೇಣಿ |

# ಮೈಸೂರು ವಿಭಾಗ ಮಟ್ಟದ ಸಹಾಯಕ ಜಿಲ್ಲಾ ಆಯುಕ್ತರ ಕಾರ್ಯದರ್ಶಿಗಳ, ಖಜಾಂಚಿಗಳ ಸಮಾವೇಶ

ದಿನಾಂಕ 16-01-2007ರಂದು ಶ್ರೀ ಜಯಚಾಮ ರಾಜೇಂದ್ರ ಸ್ಕೌಟ್ ಮತ್ತು ಗೈಡ್ ಭವನ, ಮೈಸೂರಿನಲ್ಲಿ ಮೈಸೂರು ವಿಭಾಗ ಮಟ್ಟದ ಸಹಾಯಕ ಜಿಲ್ಲಾ ಆಯುಕ್ತರುಗಳ, ಖಜಾಂಚಿ ಹಾಗೂ ಕಾರ್ಯದರ್ಶಿಗಳ ಸಮಾವೇಶ ಜರುಗಿತು. 2006-2007ನೇ ಸಾಲಿನ ಗಣತಿ, ತರಬೇತಿ ಶಿಬಿರಗಳು, ದರ್ಶನ ನಿರೂಪಣೆ, ಎ.ಡಿ.ಸಿ. ಮತ್ತು ಕಾರ್ಯದರ್ಶಿಗಳ ಕರ್ತವ್ಯ, ಶತಮಾನೋತ್ಸವ ಆಚರಣೆ, ರಾಜ್ಯ ಪುರಸ್ಕಾರ ಹಾಗೂ ರಾಷ್ಟ್ರಪತಿ ಪದಕ ಪಡೆಯಲು ಮಾರ್ಗದರ್ಶನ ಇತ್ಯಾದಿ ವಿಷಯಗಳನ್ನು ಚರ್ಚಿಸಲಾಯಿತು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಜಂಟಿ ರಾಜ್ಯ ಕಾರ್ಯದರ್ಶಿ ಶ್ರೀ ಎನ್. ಶ್ರೀನಿವಾಸನ್‌ರವರು ಸಮಾವೇಶಕ್ಕೆ ಭೇಟಿ ನೀಡಿ ಸೂಕ್ತ ಮಾರ್ಗದರ್ಶನ ನೀಡಿದರು. ಶ್ರೀ ನಾರಾಯಣ ಶೆಟ್ಟಿ ಎಸ್.ಓ.ಸಿ.(ಎಸ್), ಶ್ರೀಮತಿ ರವಿವೆಸ್ಲಿ, ಎಲ್.ಟಿ.(ಜಿ) ಕೇಂದ್ರ ಸ್ಥಾನಿಕ ಆಯುಕ್ತರು (ತರಬೇತಿ) ಶ್ರೀಮತಿ ಶಾಂತ ಗಿರಿಯಣ್ಣ, ಎಲ್.ಟಿ(ಜಿ), ಶ್ರೀಮತಿ ಕೆ.ಸಿ. ಪ್ರೇಮಲತ, ಎ.ಎಸ್.ಓ.ಸಿ.(ಜಿ) ಇವರುಗಳು ವಿವಿಧ ವಿಷಯಗಳ ಬಗ್ಗೆ ಮಾತನಾಡಿದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಪಿ. ವಿಶ್ವನಾಥ್, ಜಿಲ್ಲಾ ಆಯುಕ್ತರಾದ, ಡಾ|| ಜಿ. ಸಿದ್ಧೇಶ್, ಮೈಸೂರು ವಿಭಾಗದ ರಾಜ್ಯ ಸಹಾಯಕ ಗೈಡ್ ಆಯುಕ್ತರಾದ ಶ್ರೀಮತಿ ರತ್ನೆ ಅರಸ್, ಜಿಲ್ಲಾ ಗೈಡ್ ಆಯುಕ್ತರಾದ ಡಾ. ಕಮಲ ರಾಮನ್, ಜಿಲ್ಲಾ ಕಾರ್ಯದರ್ಶಿ, ಶ್ರೀ ಜಮೀಲ್‌ಪಾಶ, ಖಜಾಂಚಿ ಶ್ರೀ ಹೆಚ್.ಎಸ್. ಉಮೇಶ್. ಸ್ಥಾನಿಕ ಆಯುಕ್ತರಾದ ಶ್ರೀ ಚೆನ್ನಬಸಪ್ಪ ಹಾಗೂ ಎಲ್ಲಾ ಪದಾಧಿಕಾರಿಗಳು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದು ಸಮಾವೇಶದ ಯಶಸ್ವಿಗೆ ಸಹಕರಿಸಿದರು. ವಿವಿದ ಜಿಲ್ಲೆಗಳ ಪ್ರತಿನಿಧಿಗಳು ಸಮಾವೇಶದಲ್ಲಿ ಭಾಗವಹಿಸಿದ್ದರು.

# ಬೆಳಗಾಂ ವಿಭಾಗ ಮಟ್ಟದ ಸಹಾಯಕ ಜಿಲ್ಲಾ ಆಯುಕ್ತರುಗಳ ಕಾರ್ಯದರ್ಶಿಗಳ ಸಮಾವೇಶ

ದಿನಾಂಕ 18-01-2007ರಂದು ಉತ್ತರ ಕನ್ನಡ ಜಿಲ್ಲೆ ಇಡಗುಂಜಿಯಲ್ಲಿ ಬೆಳಗಾಂ ವಿಭಾಗ ಮಟ್ಟದ ಸಹಾಯಕ ಜಿಲ್ಲಾ ಆಯುಕ್ತರ, ಕಾರ್ಯದರ್ಶಿಗಳ ಸಮಾವೇಶ ಜರುಗಿತು. ಜಿಲ್ಲಾ ಮುಖ್ಯ ಆಯುಕ್ತರಾದ ಡಾ|| ಜಿ.ಜಿ. ಸಭಾಹಿತ್‌ರವರು ಸಮಾವೇಶವನ್ನು ಉದ್ಘಾಟಿಸಿ ಶುಭ ಕೋರಿದರು, ಸ್ಕೌಟ್ ಗೈಡ್ ಮೂಲಭೂತ ತತ್ವಗಳು, ದರ್ಶನ ನಿರೂಪಣೆ, ಎ.ಡಿ.ಸಿ.ಗಳ ಹಾಗೂ ಕಾರ್ಯದರ್ಶಿಗಳ ಜವಾಬ್ದಾರಿಗಳು ಸ್ಕೌಟ್ ಶತಮಾನೋತ್ಸವ ಗಣತಿ, ತರಬೇತಿ ಕಾರ್ಯಕ್ರಮಗಳು ರಾಜ್ಯ ಪುರಸ್ಕಾರ, ರಾಷ್ಟ್ರಪತಿ ಸ್ಕೌಟ್ ಗೈಡ್ ಪದಕ ಪಡೆಯಲು ಮಾರ್ಗದರ್ಶನ ಇತ್ಯಾದಿ ವಿಷಯಗಳನ್ನು ತಿಳಿಸಲಾಯಿತು. ಶ್ರೀ ನಾರಾಯಣ ಶೆಟ್ಟಿ, ಎಸ್.ಓ.ಸಿ.(ಎಸ್), ಶ್ರೀಮತಿ ಕೆ.ಕೆ. ಲೀಲಾ, ಎಸ್.ಟಿ.ಸಿ.(ಜಿ), ಶ್ರೀ ವಿ.ವಿ. ನಾಯ್ಕ, ಜಿಲ್ಲಾ ಕಾರ್ಯದರ್ಶಿ, ಶ್ರೀ ಬಿ.ಡಿ. ಫರ್ನಾಂಡೀಸ್, ಡಿ.ಟಿ.ಸಿ.(ಎಸ್) ಶ್ರೀ ಜಿ.ಸಿ. ದೇವರಾಜ್, ಎಲ್.ಟಿ.(ಜಿ), ಶ್ರೀ ಆರ್.ಟಿ. ಹೆಬ್ಬಾರ್ ಎ.ಎಲ್.ಟಿ.(ಎಸ್) ಶ್ರೀಮತಿ ಭಾರತಿ ಡಯಾಸ್, ಎ.ಎಸ್.ಓ.ಸಿ.(ಜಿ) ಇವರುಗಳು ವಿವಿಧ ವಿಷಯಗಳ ಬಗ್ಗೆ ಮಾತನಾಡಿದರು.

ಡಾ|| ಜಿ.ಜಿ. ಸಭಾಹಿತ್, ಡಿ.ಸಿ.ಸಿ.ಯವರು ಸಮಾರೋಪ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಇಡಗುಂಜಿ ದೇವಸ್ಥಾನದ ಧರ್ಮದರ್ಶಿಗಳಾದ ಶ್ರೀ ಗಜಾನನ ಸಭಾಹಿತ್ ಶ್ರೀ ಕಾಶೀನಾಥ ಹೆಗ್ಡೆ ಹಾಗೂ ವ್ಯವಸ್ಥಾಪಕರಾದ ಶ್ರೀ ವಿ.ಎಸ್. ಹೆಗ್ಗಡೆಯವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು.

# ಶಿಲನೆಯ ಗಣರಾಜ್ಯೋತ್ಸವ ಆಚರಣೆ

ದಿನಾಂಕ 26-01-2007 ರಂದು ರಾಜ್ಯ ಕೇಂದ್ರ ಕಾರ್ಯಾಲಯದ ಆವರಣದಲ್ಲಿ ಗಣರಾಜ್ಯೋತ್ಸವವನ್ನು ವಿಜೃಂಭಣೆಯಿಂದ ಆಚರಿಸಲಾಯಿತು. ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು ಧ್ವಜಾರೋಹಣ ಮಾಡಿ ಗಣರಾಜ್ಯೋತ್ಸವ ಆಚರಣೆ ಬಗ್ಗೆ ಮಾತನಾಡುತ್ತಾ ರಾಷ್ಟ್ರಪಿತ ಮಹಾತ್ಮ ಗಾಂಧಿ, ಪಂಡಿತ್ ಜವಾಹರ್‌ಲಾಲ್ ನೆಹರು ಮತ್ತು ರಾಷ್ಟ್ರಕ್ಕೆ ಸರ್ವಸ್ವವನ್ನು ತ್ಯಾಗ ಮಾಡಿದ ಪುಣ್ಯ ಪುರುಷರ ಬಗ್ಗೆ ಮಾತನಾಡಿ ಸ್ಕೌಟ್ಸ್ ಗೈಡ್ಸ್‌ಗಳೂ ಕೂಡ ಉತ್ತಮ ನಾಗರೀಕರಾಗಬೇಕೆಂದು ಆಶಿಸಿದರು. ಈ ಕಾರ್ಯಕ್ರಮದಲ್ಲಿ ರಾಜ್ಯ ಸಂಸ್ಥೆ ಪದಾಧಿಕಾರಿಗಳು, ಪೋಷಕರು ಉಪಸ್ಥಿತರಿದ್ದರು. ಈ ಕಾರ್ಯಕ್ರಮದಲ್ಲಿ 400 ಸ್ಕೌಟ್ಸ್ ಗೈಡ್ಸ್‌ಗಳು ಭಾಗವಹಿಸಿದ್ದರು. ಹಾಗೂ ಮಕ್ಕಳಿಂದ ಸಾಂಸ್ಕೃತಿಕ ಕಾರ್ಯಕ್ರಮ ನಡೆಯಿತು.

ದಿನಾಂಕ 26-1-2007 ರಂದು ಬೆಂಗಳೂರಿನ ಮಾಣಿಕ್ ಷಾ ಪರೇಡ್ ಮೈದಾನದಲ್ಲಿ ಕರ್ನಾಟಕ ಸರ್ಕಾರದ ವತಿಯಿಂದ ಗಣರಾಜ್ಯೋತ್ಸವವನ್ನು ಆಚರಿಸಲಾಯಿತು. ಘನತೆವೆತ್ತ ರಾಜ್ಯಪಾಲರಾದ ಶ್ರೀ ಟಿ.ಎನ್. ಚತುರ್ವೇದಿಯವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿ ಧ್ವಜಾರೋಹಣ ಮಾಡಿ ವಂದನೆ ಸ್ವೀಕರಿಸಿದರು.

ಈ ಸಮಾರಂಭದಲ್ಲಿ ಸ್ಕೌಟ್ಸ್ ಹಾಗೂ ಗೈಡ್ಸ್ ದಳಗಳು ಪಥಸಂಚಲನೆಯಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದರು.

# ಶಿಸ್ತು

ಶಿಸ್ತು ಬೇಕು ನಮ್ಮ ನಿತ್ಯ ಬಾಳಿನಲ್ಲಿ
ಧೈರ್ಯ ಪಡಲು ಬೇಕು ನಾವು ಸೋಲಿನಲ್ಲಿ
ನಿಯಮ ಮೀರಿ ನಾವು ಎಂದು ನಡೆಯಬಾರದು
ವೇಳೆ ತಪ್ಪಿ ಕೆಲಸವೆಂದೂ ಮಾಡಬಾರದು.

ಪರರಿಗೆ ಸೇವೆ, ಚಾಡಿಕೋಡು, ಮೋಸ ವಂಚನೆ
ತಿರುಗಿ ನಮಗೆ ಬರುವುದೆಂದು ಮರೆಯಬಾರದು
ವೇಳೆ ಮೀರಿ ಶಾಲೆಗೆಂದು ಹೋಗಬಾರದು
ವೇಳೆಯಾದ ಮೇಲೆ ಅಲ್ಲಿ ನಿಲ್ಲಬಾರದು.

ಬೀದಿಯಲ್ಲಿ ನಿಯಮ ಮೀರಿ ನಡೆಯಬಾರದು
ಓದಿ ಬರೆದು ಕಲಿಯುವುದನ್ನು ತಡೆಯಬಾರದು
ಪಾಠ ನಡೆವ ವೇಳೆಯಲ್ಲಿ ಮೌನಬೇಕು
ಊಟ ತಿಂಡಿ ತಿನ್ನುವಲ್ಲಿ ಮಿತಿಯುಬೇಕು.

ಹುಚ್ಚು ಹುಚ್ಚು ಮಾತನೆಂದು ಆಡಬಾರದು
ವೆಚ್ಚವೆಂದು ಆಯದಿಂದ ಮೀರ ಬಾರದು
ಶಿಸ್ತು ನಮ್ಮ ಜೊತೆಯಲೆಂದು ಬೇಕೇಬೇಕು
ಶಿಸ್ತಿನಿಂದ ಬಾಳು ಹಸನಗೊಳ್ಳಬೇಕು.

ಶ್ರೀಮತಿ ಹಿಲ್ಡಾ ತಾವ್ರೊ
ಸಂತ ಅಂತೋನಿ ಹಿರಿಯ ಪ್ರಾಥಮಿಕ ಶಾಲೆ
ಅಮ್ಟೂರು ಕರಿಂಗಾನ, ಬಂಟ್ವಾಳ ತಾಲೂಕು
ದಕ್ಷಿಣ ಕನ್ನಡ



# ಗಣರಾಜ್ಯ

ಗೊ.ರು. ಚನ್ನಬಸಪ್ಪ

ನಮ್ಮದು ಸಂವಿಧಾನಬದ್ಧ ಗಣರಾಜ್ಯ. ಅಂದರೆ ಜನರಾಜ್ಯ. ಇದನ್ನೇ ಸಂವಿಧಾನಬದ್ಧ 'ಪ್ರಜಾಸತ್ತಾತ್ಮಕ ಗಣರಾಜ್ಯ' ಎಂದು ಕರೆದಿದ್ದೇವೆ. ಭಾರತದ ಸಂವಿಧಾನ ಇದ್ದಕ್ಕಿದ್ದಂತೆ ರಚನೆಯಾದುದಲ್ಲ. ಸುದೀರ್ಘ ಅಧ್ಯಯನ ಅನುಭವಗಳ ಆಧಾರದ ಮೇಲೆ ರೂಪುಗೊಂಡದ್ದು. ಇಲ್ಲಿನ ವೈವಿಧ್ಯಪೂರ್ಣ ಪರಂಪರೆ, ಪದ್ಧತಿ, ಭಾಷೆ, ಪ್ರದೇಶಗಳ ಪ್ರತಿನಿಧಿಗಳೆಲ್ಲ ಮಹತ್ವದ ಅಂಶಗಳನ್ನು ಸಂಯೋಜಿಸಿ ಭಾರತೀಯ ಬದುಕಿಗೆ ಹೊಂದಿಕೊಳ್ಳುವಂತೆ ಇದರ ರಚನೆಯಾಗಿದೆ.

ಭಾರತ ಪ್ರಜಾಪ್ರಭುತ್ವ ಇಡೀ ವಿಶ್ವದಲ್ಲೇ ದೊಡ್ಡದು. ಗಾತ್ರದಲ್ಲಷ್ಟೇ ಅಲ್ಲ; ಪಾತ್ರದಲ್ಲೂ ಕೂಡ. ನಮ್ಮ ಸಂವಿಧಾನ ರಚನೆಯಾದದ್ದು 1949ರಲ್ಲಿ. ಅಧಿಕೃತವಾಗಿ ಜಾರಿಗೆ ಬಂದದ್ದು 1950ರ ಜನವರಿ 26 ರಂದು. ಆದರೆ ಇದರ ರಚನಾಕಾರ್ಯ ಕುಡಿಯೊಡೆಯತೊಡಗಿದ್ದು 1858ರಷ್ಟು ಹಿಂದೆ. ಆಗ ಬ್ರಿಟಿಷ್ ಇಂಡಿಯಾ ಕಂಪನಿಯ ಕಾನೂನಾಗಿ ರೂಪುಗೊಂಡು ನಂತರ ಸುಮಾರು 90 ವರ್ಷಗಳ ಅವಧಿಯಲ್ಲಿ ಭಾರತ ಸ್ವಾತಂತ್ರ್ಯ ಹೋರಾಟದ ಫಲವಾಗಿ ಅನೇಕ ಬದಲಾವಣೆಗಳನ್ನು ಕಂಡಿದೆ. 1861ರಲ್ಲಿ ಹಿಂದಿನ ಕಾನೂನಲ್ಲಿ ಮೊದಲು ಸುಧಾರಣೆಯಾಯಿತು. ನಂತರ 1892, 1909, 1915, 1917, 1919, 1927, 1929, 1930, 1932, 1937, 1946 ಹೀಗೆ ವಿವಿಧ ಹಂತಗಳಲ್ಲಿ ಆಡಳಿತ ವಿಕೇಂದ್ರೀಕರಣ ಮತ್ತು ಸ್ವಾಯತ್ತ ಪ್ರಭುತ್ವ ಕಾನೂನು ಸುಧಾರಣೆಯಾಗುತ್ತ ಬಂದು, 1949ರ ಜುಲೈ 18 ರಂದು ಸೇರಿದ್ದ ರಾಷ್ಟ್ರೀಯ ಮಂಡಳಿಯ ಅಧಿವೇಶನದಲ್ಲಿ ಸ್ವಾಯತ್ತ ಶಾಸನ ಸಭೆಗಳಿಗೆ ಪರಮಾಧಿಕಾರ ನೀಡುವ ವಿಧೇಯಕ ಅಂಗೀಕೃತವಾಯಿತು. ಅದೇ ಆಗಸ್ಟ್ 29 ರಂದು ಸ್ವತಂತ್ರ ಭಾರತದ ಸಂವಿಧಾನದ ಕರಡು ರಚನಾ ಸಮಿತಿ ರೂಪುಗೊಂಡು 1949ರಲ್ಲಿ ಆ ಸಮಿತಿಯು ಕರಡು ಪ್ರಕಟಿಸಿತು. ನಂತರ ಹಲವಾರು ಬಾರಿ ಸಭೆ ಸೇರಿ ಆ ಕರಡನ್ನು ವಿವರವಾಗಿ ಪರಿಶೀಲಿಸಲಾಯಿತು. 1949ರ ನವೆಂಬರ್ 26 ರಂದು ಅಂತಿಮ ವಾಚನ ಮತ್ತು ಪರಿಶೀಲನೆ ಮುಗಿದು ಅಂದೇ ಸಂವಿಧಾನ ಸಭೆಯ ಅಧ್ಯಕ್ಷರ ಅಂಗೀಕಾರವಾಯಿತು.

1950ರ ಜನವರಿ 26 ರಂದು ಸ್ವತಂತ್ರ ಭಾರತ ತನ್ನದೇ ಆದ ಅಧಿಕೃತ ಸಂವಿಧಾನವನ್ನು ಅನುಷ್ಠಾನಗೊಳಿಸಿತು. ನಮ್ಮ ಸಂವಿಧಾನದ ಪೀಠಿಕೆಯಲ್ಲಿ ರಾಜಕೀಯ ನ್ಯಾಯಕ್ಕೆ ಭದ್ರತೆ, ರಾಷ್ಟ್ರೀಯ ವ್ಯವಸ್ಥೆಯಲ್ಲಿ ಎಲ್ಲರ ಪಾಲು, ಪ್ರೌಢ ಮತದಾನ ಪದ್ಧತಿ - ಇವುಗಳಿಗೆ ಮುಕ್ತ ಅವಕಾಶ ಕಲ್ಪಿಸಲಾಗಿದೆ. ಧರ್ಮ, ಜನಾಂಗ, ಲಿಂಗ, ಭಾಷೆ, ಜನ್ಮ ಸ್ಥಳಗಳ ಭೇದ ಭಾವಕ್ಕೆ

ಅವಕಾಶವಿಲ್ಲದ 'ಪ್ರಜಾಪ್ರಭುತ್ವವಾದಿ ಗಣರಾಜ್ಯ' ನಮ್ಮದಾಗಿದೆ.

ನಮ್ಮ ಸಂವಿಧಾನ, ನಾನು ಮೊದಲೇ ಹೇಳಿದಂತೆ, ಸುದೀರ್ಘ ಚರ್ಚೆ ಮತ್ತು ಅನುಭವಗಳ ಒಂದು ಮಹತ್ವಪೂರ್ಣ ದಾಖಲೆ. ಇದರಲ್ಲಿ ಸಂಸತ್ತಿನ ಸಾರ್ವಭೌಮತೆ ಮತ್ತು ನ್ಯಾಯಾಂಗದ ಶ್ರೇಷ್ಠತೆಗಳ ಮಧ್ಯೆ ತುಂಬ ಅರ್ಥಪೂರ್ಣ ಹೊಂದಾಣಿಕೆಯಿದೆ. ಮೂಲಭೂತ ಹಕ್ಕುಗಳ ಬಗೆಗೆ ಸಾಕಷ್ಟು ವಿವರವಾಗಿ ವಿಶ್ಲೇಷಿಸಲಾಗಿದೆ. ನಮ್ಮದು ಜಾತ್ಯಾತೀತ ರಾಷ್ಟ್ರವೆಂದು ಘೋಷಿಸಲಾಗಿದೆ.

ಅಧಿಕಾರ ವಿಕೇಂದ್ರೀಕರಣ, ಜಾತ್ಯಾತೀತತೆ, ಸರ್ವ ಸಮಾನತೆ, ಅಲ್ಪ ಸಂಖ್ಯಾತರ ಮತ್ತು ದುರ್ಬಲ ವರ್ಗದ ಹಿತ ರಕ್ಷಣೆ, ವ್ಯಕ್ತಿ ಸ್ವಾತಂತ್ರ್ಯ, ಧಾರ್ಮಿಕ ಸ್ವಾತಂತ್ರ್ಯ, ಆಸ್ತಿಯ ಹಕ್ಕು, ಶೋಷಣೆ ವಿರುದ್ಧ ರಕ್ಷಣೆ, ವಿದೇಶಾಂಗ ನೀತಿ, ಒಳಾಡಳಿತ ಶಾಂತಿ ಪಾಲನೆ, ಶಿಕ್ಷಣ ಪ್ರಸಾರ ಮತ್ತು ಆರೋಗ್ಯ ರಕ್ಷಣೆ, ಉದ್ಯೋಗ ಸ್ವಾತಂತ್ರ್ಯ - ಹೀಗೆ ಭಾರತೀಯ ಜನಸಮುದಾಯದ ಘನತೆ ಗೌರವಗಳನ್ನು ರಕ್ಷಿಸಿ, ಅವರ ಜೀವನ ಸುಧಾರಣೆಗೆ ಅಗತ್ಯವಾದ ಅನೇಕ ನಿರ್ದೇಶಿತ ತತ್ವಗಳನ್ನು ನಮ್ಮ ಸಂವಿಧಾನದಲ್ಲಿ ಅಳವಡಿಸಲಾಗಿದೆ.

ನಾವು ನಮ್ಮದೇ ಸಂವಿಧಾನವನ್ನು ಅಂಗೀಕರಿಸಿ ಗಣರಾಜ್ಯವಾಗಿ ಇಲ್ಲಿಗೆ 50 ವರ್ಷಗಳಾಗಿವೆ. ನಮ್ಮ ಸ್ವಾತಂತ್ರ್ಯ ಸುವರ್ಣ ಮಹೋತ್ಸವವನ್ನು ಆಚರಿಸಿದ್ದೇವೆ. ಈಗ ನಮ್ಮ ಗಣರಾಜ್ಯದ ಸುವರ್ಣಮಹೋತ್ಸವ ಆಚರಿಸಲಿದ್ದೇವೆ. ಆದರೆ ನಮ್ಮ ಗಣರಾಜ್ಯದ ಆಶಯ ಇನ್ನೂ ನಿರೀಕ್ಷಿತ ಮಟ್ಟದಲ್ಲಿ ಈಡೇರಿಲ್ಲವೆಂದೇ ಹೇಳಬೇಕು.

ನಮ್ಮ ಗಣರಾಜ್ಯದ ಸಂವಿಧಾನ ನಾವೆಲ್ಲ ಕೂಡಿ ಬದುಕುವುದಕ್ಕೆ ಸಾಕಷ್ಟು ಅವಕಾಶ ಕಲ್ಪಿಸಿದೆ. ಆದರೆ ಅನೇಕ ಸಂದರ್ಭಗಳಲ್ಲಿ ಸ್ವಾರ್ಥ ಹಿತಾಸಕ್ತಿಗಳು ಸಂವಿಧಾನದ ನೀತಿ-ನಿಯಮಗಳನ್ನೇ ತಮ್ಮ ಅನುಕೂಲಕ್ಕೆ ತಕ್ಕಂತೆ ವ್ಯಾಖ್ಯಾನಿಸಿ ಮೂಲ ಆಶಯಕ್ಕೆ ಭಂಗ ತಂದಿರುವುದು ನಮ್ಮ ಅನುಭವಕ್ಕೆ ಬಂದಿದೆ. ಜನಹಿತ ದೃಷ್ಟಿಯಿಂದ ಅಗತ್ಯ ತಿದ್ದುಪಡಿಮಾಡಲೂ ಸಹ ನಮ್ಮ ಸಂವಿಧಾನದಲ್ಲಿ ಅವಕಾಶವಿದೆ. ಆದರೆ ನಾವೇ ಅಂಗೀಕರಿಸಿರುವ ಸಂವಿಧಾನದ ಆದೇಶಕ್ಕೆ ಅನುಗುಣವಾಗಿ ನಡೆದುಕೊಳ್ಳದಿದ್ದರೆ ಸಂವಿಧಾನದ ಕರ್ತರು ನಿರೀಕ್ಷಿಸಿದ ಭಾರತದ ಪ್ರಗತಿ ಹೇಗಾದೀತು?

ಭಾರತ ಗಣರಾಜ್ಯ ಇಂದು ನಮ್ಮೆಲ್ಲರಿಂದ ಬೇಡುವುದು ಶ್ರಮದ ದುಡಿಮೆಯನ್ನು, ಪ್ರಾಮಾಣಿಕ ವ್ಯವಹಾರವನ್ನು, ಜಾತ್ಯತೀತ ನಡವಳಿಕೆಯನ್ನು. ಸಂವಿಧಾನ ನಮಗೆ ಎಷ್ಟೋ ಹಕ್ಕುಗಳನ್ನು ನೀಡಿದೆ. ಅದರಂತೆ ಕರ್ತವ್ಯವನ್ನೂ ನಿರ್ದೇಶಿಸಿದೆ. ಅಂತಹ ಕರ್ತವ್ಯ ಪಾಲನೆಯಿಂದ ಮಾತ್ರ ನಮ್ಮ ಗಣರಾಜ್ಯ ವಿಶ್ವದಲ್ಲಿ ಗಣ ರಾಜ್ಯವಾದೀತು; ನಿಜವಾದ ಅರ್ಥದಲ್ಲಿ ಜನರಾಜ್ಯವಾದೀತು.

ಗಣರಾಜ್ಯ ದಿನಾಚರಣೆಯ ಸಂದರ್ಭದಲ್ಲಿ ಪ್ರತಿಯೊಬ್ಬ ಭಾರತೀಯನೂ ರಾಷ್ಟ್ರ ಸಮಗ್ರತೆ ಮತ್ತು ಸಮೃದ್ಧಿಗಾಗಿ ಅಂತಹ ಕರ್ತವ್ಯದ ದೀಕ್ಷೆ ವಹಿಸಬೇಕು.

**(2000ದಲ್ಲಿ ಸಿದ್ಧಪಡಿಸಿದ ಲೇಖನ)**

+ ಧರ್ಮದಿಂದ ಸಂಪತ್ತು, ಸುಖ ದೊರೆಯುತ್ತದೆ. ಎಲ್ಲ ಇಷ್ಟಾರ್ಥಗಳೂ ಧರ್ಮದಿಂದಲೇ ಲಭಿಸುತ್ತವೆ. ಆದ್ದರಿಂದ ಪ್ರಪಂಚದಲ್ಲಿ ಧರ್ಮವೇ ಶ್ರೇಷ್ಠವಾದುದು.

- ವಾಲ್ಮೀಕಿ ರಾಮಾಯಣ

+ ರಟ್ಟೆ ಮುರಿದು ಸಂಪಾದಿಸಿದ ರೊಟ್ಟಿಯ ರುಚಿ, ದೇವಲೋಕದ ಅಮೃತಕ್ಕೂ ಮಿಗಿಲು.

- ಟಿ.ಪಿ. ಕೈಲಾಸಂ

+ ಚಂದನವಾಗಲಿ, ಜಾಜಿಯಾಗಲಿ, ಕಮಲದ ಹೂ ಆಗಲಿ - ಇವುಗಳೆಲ್ಲದರ ವಾಸನೆಗಿಂತ ಮನುಷ್ಯನ ನಡತೆಯ ಪರಿಮಳವೇ ಹೆಚ್ಚು.

- ಬುದ್ಧ

+ ಯಾರು ತಮ್ಮ ಕೆಲಸವನ್ನು ತಾವೇ ಮಾಡಿಕೊಳ್ಳುತ್ತಾರೋ, ಅವರಿಗೆ ದೇವರೂ ಸಹಾಯ ಮಾಡುತ್ತಾನೆ.

- ಎಸ್. ರಾಧಾಕೃಷ್ಣನ್

+ ಮನುಷ್ಯರಿಗೆ ರೂಪವೇ ಆಭರಣ, ರೂಪಕ್ಕೆ ಗುಣ ಆಭರಣ, ಗುಣಕ್ಕೆ ಜ್ಞಾನ ಆಭರಣ, ಜ್ಞಾನಕ್ಕೆ ಕ್ಷಮೆಯೇ ಭೂಷಣವಾದ ಆಭರಣ.

- ಸುಭಾಷಿತ

+ ಕೋಪದಿಂದ ಕೀರ್ತಿ ನಾಶವಾಗುವುದು, ಕೋಪ ಸಂಪತ್ತನ್ನೂ ಹಾಳು ಮಾಡುತ್ತದೆ.

- ಗರುಡ ಪುರಾಣ

+ ಅಲ್ಪರು ಅದೃಷ್ಟ ಎನ್ನುತ್ತಾರೆ. ಬುದ್ಧಿಶಾಲಿಗಳು ಕಾರ್ಯಕಾರಣಗಳನ್ನು ನಂಬುತ್ತಾರೆ.

- ಬಿ.ಎಂ. ಶ್ರೀಕಂಠಯ್ಯ

+ ಒಬ್ಬ ಮನುಷ್ಯನ ಯೋಗ್ಯತೆಯನ್ನು ಪರೀಕ್ಷಿಸಬೇಕಾದರೆ ಅವನಿಗೆ ಅಧಿಕಾರ ಕೊಟ್ಟು ನೋಡಬೇಕು.

- ಅಬ್ರಹಾಂ ಲಿಂಕನ್

# ಕರ್ನಾಟಕ ಮಾತೆ

ಜಯ ಕರ್ನಾಟಕ ಜಯ ಕರ್ನಾಟಕ
ಜಯ ಕರ್ನಾಟಕದ ಮಾತೆ
ಜನುಮದ ಋಣವ ತೀರಿಸ ಬಂದಿಹೆ
ಅನ್ನದಾತೆ

ಶ್ರೀಗಂಧದ ನಾಡಿದು ಕರ್ನಾಟಕ
ಕಾವೇರಿ ಹರಿವ ನಾಡಿದು ಕರ್ನಾಟಕ
ಶಿಲ್ಪಿಗಳ ನಾಡಿದು ಕರ್ನಾಟಕ
ಬೇಲೂರು-ಹಳೇಬೀಡು, ಹಂಪೆಯ
ನೋಡಿದರೆ ಸಿಗುವುದು ಇದರ ಸುಖ;

ವೀರ-ವನಿತೆಯ ನಾಡಿದು ಕರ್ನಾಟಕ
ಕಿತ್ತೂರಿನ ರಾಣಿ, ಒನಕೆ ಓಬವ್ವರ
ಇಂದಿಗೂ ನೆನೆಯುವೆವು ಪ್ರಮುಖ;

ದಾಸ-ಶ್ರೇಷ್ಠರ ನಾಡಿದು ಕರ್ನಾಟಕ
ಕನಕ-ಪುರಂದರರ ಪದಗಳು
ಇಂದಿಗೂ ತುಂಬುವುದು ಪುಳಕ;

ಗುಡಿ-ಗೋಪುರಗಳ ನಾಡಿದು ಕರ್ನಾಟಕ
ಶೃಂಗೇರಿ ಶಾರದೆ, ಹೊರನಾಡ ಅನ್ನಪೂರ್ಣೇಶ್ವರಿ,
ಧರ್ಮಸ್ಥಳದ ಮಂಜುನಾಥ ದೇವರುಗಳು
ನೀಡುವರು ಬೆಳಕ;

ಬುದ್ಧಿ-ಜೀವಿಗಳ ನಾಡಿದು ಕರ್ನಾಟಕ
ವಿಶ್ವೇಶ್ವರಯ್ಯನವರು ನಿರ್ಮಿಸಿದ ಕನ್ನಂಬಾಡಿ ಅಣೆಕಟ್ಟು
ಇಂದಿಗೂ ಮೈ-ಮನದಲ್ಲಿ ತುಂಬುವುದು ಪುಳಕ;

ಕವಿಗಳ ಬೀಡಿದು ಕರ್ನಾಟಕ
ಕುವೆಂಪು, ಬೇಂದ್ರೆ, ನಿಸಾರ್, ಜಿಎಸ್‌ಎಸ್‌ರಂತ
ಕವಿಗಳು ಇದರಲ್ಲಿ ಪ್ರಮುಖ;

ಕಲೆಗಳ ತವರೂರು ಕರ್ನಾಟಕ
ಯಕ್ಷಗಾನ, ವೀರಗಾಸೆ, ಡೊಳ್ಳು-ಕುಣಿತಗಳು
ಸೃಷ್ಟಿಸುವುದು ಜಾನಪದ ಲೋಕ;

ಸಂಗೀತ ಪ್ರಿಯರ ನಾಡಿಯ ಕರ್ನಾಟಕ
ಅಶ್ವಥ್, ಅತ್ರಿ, ಎಸ್‌ಪಿಬಿ, ಡಾ. ರಾಜ್‌ರವರು
ಚೆಲ್ಲಿಹರು ಸಂಗೀಕತೆ ಬೆಳಕ;

ಇನ್ನೆಷ್ಟು ಬಣ್ಣಿಸಲಿ ನಿನ್ನ, ಓ! ಕರ್ನಾಟಕ,
ದುಡಿಯುವೆವು ನಾವು ನಿರಂತರ
ಬೆಳಗಲು ಕನ್ನಡದ ಬೆಳಕ;

ಸುವರ್ಣ ಕರ್ನಾಟಕ ವರ್ಷದಲ್ಲಿ
ಕನ್ನಡಕ್ಕಾಗಿ ದುಡಿಯುವ
ಪ್ರತಿಯೊಬ್ಬ ಕನ್ನಡಿಗನೂ ಆಗಿಹ
ಕನ್ನಡಕ್ಕಾಗಿ ದುಡಿಯುವ ಜನಕ

ಜೈ ಕರ್ನಾಟಕ; ಜೈ ಭುವನೇಶ್ವರಿ ದೇವಿ

ಜೀವನ್ ಪದ್ಮಾಕರ್
15ನೇ ಕಂಠೀರವ ಸ್ಕೌಟ್ ಗ್ರೂಪ್
4ನೇ ತರಗತಿ, ಬೆಥೆಸ್ದಾ, ಕೆಂಗೇರಿ, ಬೆಂಗಳೂರು-560 060.




### ಧಾರವಾಡ ಜಿಲ್ಲೆ

ನವಲಗುಂದ ತಾಲ್ಲೂಕಿನ ನಲವಡಿಯು, ವೇ.ರಾ.ಪಾ. ಸರ್ಕಾರಿ ಪದವಿ ಪೂರ್ವ ಕಾಲೇಜಿನ ಸ್ಕೌಟ್ಸ್‌ಗಳಿಗೆ ದೀಕ್ಷಾ ಸಮಾರಂಭ ಹಾಗೂ ಪರಿಸರ ದಿನಾಚರಣೆಯನ್ನು ಇತ್ತೀಚೆಗೆ ಹಮ್ಮಿಕೊಳ್ಳಲಾಗಿತ್ತು. ಸಂಸ್ಥೆಯ ಪ್ರಾಚಾರ್ಯರಾದ ಶ್ರೀ ಎಚ್.ಬಿ. ಅರ್ಕಸಾಲಿಯವರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಶ್ರೀ ಕೆ.ಎನ್. ಬೆಳಗಡಿ, ಪ್ರಾಚಾರ್ಯರು, ಶ್ರೀಮತಿ ಲಕ್ಷ್ಮೀಬಾಯಿ ಹಾಗೂ ಶ್ರೀ ಜಿ.ಎ. ನರಗುಂದ, ಎಲ್.ಟಿ(ಸ್ಕೌ) ಇವರುಗಳು ಅತಿಥಿಗಳಾಗಿ ಆಗಮಿಸಿದ್ದರು. ಸ್ಕೌಟ್ ಮಾಸ್ಟರ್‌ಗಳಾದ ಶ್ರೀ ಡಿ.ಎಚ್. ಟೆಂಕಪ್ಪನವರ, ಶ್ರೀ ದೊಡ್ಡಲಿಂಗಣ್ಣ ಹಾಗೂ ಇಕೋ ಕ್ಲಬ್‌ನ ಸಂಚಾಲಕರಾದ ಶ್ರೀ ಎಸ್.ವಿ. ಗುರುರಾವ್‌ನವರು ಭಾಗವಹಿಸಿದ್ದರು.

### ರಾಯಚೂರು ಜಿಲ್ಲೆ

ಪ್ರಸಕ್ತ ವರ್ಷದ ಸ್ಕೌಟ್ಸ್-ಗೈಡ್ಸ್‌ಗಳ ರಾಜ್ಯ ಪುರಸ್ಕಾರ ಪರೀಕ್ಷೆ ಮತ್ತು ಕಬ್ಸ್ ಬುಲ್‌ಬುಲ್‌ಗಳ ಚತುರ್ಥಚರಣವಿ ಹೀರಕ್ ಪಂಕ್ ಪ್ರಶಸ್ತಿಗಳ ಪರೀಕ್ಷಾ ಶಿಬಿರದ ಕಾರ್ಯಕ್ರಮ ವಿದ್ಯಾಭಾರತಿ ಪ್ರೌಢಶಾಲೆಯಲ್ಲಿ ನಡೆಯಿತು. ಈ ಪರೀಕ್ಷೆಯಲ್ಲಿ ಜಿಲ್ಲೆಯ ವಿವಿಧ ಶಾಲೆಗಳಿಂದ 250 ಮಂದಿ ಭಾಗವಹಿಸಿ ಪರೀಕ್ಷೆಯ ವಿವಿಧ ಪ್ರಾಯೋಗಿಕ ಚಟುವಟಿಕೆಗಳನ್ನು ಮಾಡಿ ತೋರಿಸಿದರು ಕಾರ್ಯಕ್ರಮದ ಅಧ್ಯಕ್ಷತೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ. ತಿಮ್ಮಯ್ಯನವರು ವಹಿಸಿದ್ದರು.

ಪರೀಕ್ಷೆಯ ಮುಖ್ಯಸ್ಥರಾಗಿ ಡಾ|| ಹೆಚ್.ಬಿ. ಘರಸೆಟ್ಟಿ, ಡಿ.ಓ.ಸಿ., ಬೀದರ್, ಶ್ರೀ ಜಯರಾಜ ಭೂಸದ್ ಕೊಪ್ಪಳ, ಶ್ರೀ ವೀರಭದ್ರಯ್ಯ ಯಡಹಳ್ಳಿ, ಡಿ.ಓ.ಸಿ., ಗುಲಬರ್ಗಾ, ಶ್ರೀಮತಿ ಶಾಂತಾ (ಗೈಡ್ಸ್) ಬೆಂಗಳೂರು ಇವರು ಆಗಮಿಸಿದ್ದರು.

### ಸುಭಾಷ್ ಚಂದ್ರಬೋಸ್ ಸ್ಕೌಟ್ಸ್ ಘಟಕ ಉದ್ಘಾಟನಾ ಸಮಾರಂಭ

ದಿನಾಂಕ 14-12-2006 ರಂದು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಗಾಣಧಾಳದಲ್ಲಿ ಸ್ಕೌಟ್ಸ್ ಘಟಕವನ್ನು ಉದ್ಘಾಟನೆ ಮಾಡಲಾಯ್ತು. ಮುಖ್ಯ ಗುರುಗಳಾದ ಶ್ರೀ ರಾಮಚಂದ್ರ ರೆಡ್ಡಿಯವರ ಅಧ್ಯಕ್ಷತೆಯಲ್ಲಿ ಎಸ್.ಡಿ.ಎಂ.ಸಿ. ಅಧ್ಯಕ್ಷ ಶ್ರೀ ಶ್ರೀನಿವಾಸಾಚಾರ್ಯರು ಜ್ಯೋತಿ ಬೆಳಗಿಸುವ ಮೂಲಕ ಘಟಕದ ಉದ್ಘಾಟನಾ ಕಾರ್ಯ ನೆರವೇರಿಸಿದರು. ಜಿಲ್ಲಾ ಸಂಘಟಕರಾದ ಶ್ರೀ ಖಾಜಾ ಹುಸೇನ್ ಹಾಗೂ ಶ್ರೀಮತಿ ಭುವನೇಶ್ವರಿಯವರ ನಿರ್ದೇಶನದನ್ವಯ ಸ್ಕೌಟ್ಸ್ ಮಕ್ಕಳಿಗೆ ಧ್ವಜವಂದನೆ ಮತ್ತು ಪ್ರತಿಜ್ಞಾವಿಧಿ ಬೋಧಿಸಲಾಯ್ತು. ಶಾಲೆಯ ದೈಹಿಕ ಶಿಕ್ಷಕರಾದ ಶ್ರೀ ಮೋಹನ್ ಭಾವಿಮನಿಯವರು 'ಸ್ಕೌಟ್ ಮಾಸ್ಟರ್' ಆಗಿ ದೀಕ್ಷೆ ಸ್ವೀಕರಿಸಿದರು. ಶಾಲೆಯ ಎಸ್.ಡಿ.ಎಂ.ಸಿ. ಸದಸ್ಯರು, ವಿವಿಧ ಆಹ್ವಾನಿತ ಶಾಲೆಗಳ ಶಿಕ್ಷಕರೂ ಈ ಸಮಾರಂಭದಲ್ಲಿ ಪಾಲ್ಗೊಂಡಿದ್ದರು.

ಸ್ಕೌಟ್ಸ್ ಮಕ್ಕಳಿಗೆ ಸಮವಸ್ತ್ರಗಳನ್ನು ದೇಣಿಗೆಯಾಗಿ ನೀಡಿರುವ ಪಂಚಮುಖಿ ಪ್ರಾಣದೇವರ ಗುಡಿಯ ಪ್ರಧಾನ ಅರ್ಚಕರಾದ ಶ್ರೀ ಭೀಮಾಚಾರ್, ಜಿಲ್ಲಾ ಪಂಚಾಯ್ತಿ ಸದಸ್ಯರು, ಶ್ರೀಮತಿ ಆರ್. ನಾಗಮ್ಮ ಭೀಮಯ್ಯ ನಾಯಕ್, ಡಾ. ದೇವೇಂದ್ರಪ್ಪ, ಎಸ್.ಐ.ಸಿ. ರಂಗೇಶ್, ಬಿ. ಗುರುಸ್ವಾಮಿ, ಎಸ್.ಡಿ.ಎಂ.ಸಿ. ಸದಸ್ಯೆ ಶ್ರೀಮತಿ ಸುವರ್ಣ, ಶಿಕ್ಷಕಿ ಶ್ರೀಮತಿ ನಾಗಲಕ್ಷ್ಮಿ, ಹೆಚ್.ಎಸ್. ರವರನ್ನು ಅಭಿನಂದಿಸಲಾಯ್ತು.

ಇದರಿಂದ ಪ್ರೇರಿತರಾಗಿ ಗ್ರಾಮದ ಶ್ರೀ ಧನಂಜಯ ಸ್ವಾಮಿಗಳು ಶ್ರೀ ರಮೇಶ್ ಚೌದರಿ ಮುಂತಾದವರು ಸ್ಕೌಟ್ಸ್ ಸಮವಸ್ತ್ರಗಳನ್ನು ದೇಣಿಗೆ ನೀಡುವುದಾಗಿ ಪ್ರಕಟಿಸಿದರು.

ಶ್ರೀ ಧನಂಜಯಸ್ವಾಮಿಗಳು ವಿದ್ಯಾರ್ಥಿನಿಯರಿಗಾಗಿ "ಗೈಡ್ಸ್" ಘಟಕವನ್ನೂ ಉದ್ಘಾಟಿಸಬೇಕೆಂದು ಸಲಹೆ ನೀಡಿದರು. ಇದೇ ಸಂದರ್ಭದಲ್ಲಿ ಸಿ.ಆರ್.ಪಿ.ಗಳಾದ ಶ್ರೀ ಮಿರ್ಜಾಪುರ ಮಹಾದೇವಪ್ಪ ಮತ್ತು ಶ್ರೀ ನರಸಿಂಹಲು ಭಾಗವಹಿಸಿದ್ದರು.

## ತುಮಕೂರು ಜಿಲ್ಲೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ತುಮಕೂರು ಜಿಲ್ಲಾ ಸಂಸ್ಥೆ ವತಿಯಿಂದ ಜಿಲ್ಲಾ ಮಟ್ಟದ ಆರಾಳಿಗರ (ಸಿಕ್ಸರ್ಸ್) ತರಬೇತಿ ಶಿಬಿರವನ್ನು ದಿನಾಂಕ 25.9.2006 ರಿಂದ 27.9.2006ರ ವರೆಗೆ ಎಂಪ್ರೆಸ್ ಬಾಲಕಿಯರ ಶಾಲೆ ತಮಕೂರು ಇಲ್ಲಿ ನಡೆಸಲಾಯಿತು. ಶಿಬಿರದಲ್ಲಿ 36 ಕಬ್‌ಗಳು 23 ಬುಲ್‌ಬುಲ್‌ಗಳು ಒಟ್ಟು 59 ಮಕ್ಕಳು ಭಾಗವಹಿಸಿದ್ದರು. ಕಬ್ ವಿಭಾಗದ ನಾಯಕರಾಗಿ ಶ್ರೀಮತಿ ಜಯಂತಿಯವರು ಮತ್ತು ಬುಲ್‌ಬುಲ್ ವಿಭಾಗದ ನಾಯಕಕಿಯಾಗಿ ಶ್ರೀಮತಿ ಜಯರಾಣಿಯವರು ಶಿಬಿರವನ್ನು ಮುನ್ನಡೆಸಿದರು. ಸಹಾಯಕರುಗಳಾಗಿ ಶ್ರೀ ಬಸವಾಚಾರ್, ಶ್ರೀಮತಿ ಲತಾರಾಣಿ, ಶ್ರೀಮತಿ ಎವಲಿನ್ ಗ್ರೇಸ್, ಶ್ರೀ ಬದರಿನಾಥ್‌ರವರು ಭಾಗವಹಿಸಿ ಶಿಬಿರವನ್ನು ನಡೆಸಿದರು. ಕಾರ್ಯಕ್ರಮದ ಉದ್ಘಾಟನೆಯನ್ನು ಶ್ರೀ ಬಿ.ಆರ್. ವೇಣು ಗೋಪಾಲಕೃಷ್ಣ, ಜಿಲ್ಲಾ ಆಯುಕ್ತರು (ಸ್ಕೌ) ನೆರವೇರಿಸಿದರು. ಸಮಾರೋಪ ಸಮಾರಂಭದಲ್ಲಿ ಶ್ರೀಮತಿ ಆಶಾ ಪ್ರಸನ್ನ ಕುಮಾರ್, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀಮತಿ ಕಮಲ, ಜಿಲ್ಲಾ ಆಯುಕ್ತರು, (ಗೈಡ್) ಕಾರ್ಯದರ್ಶಿ, ಜಿಲ್ಲಾ ತರಬೇತಿ ಆಯುಕ್ತರುಗಳು ಭಾಗವಹಿಸಿದ್ದರು.

## ದಕ್ಷಿಣ ಕನ್ನಡ ಜಿಲ್ಲೆ

### ಮಂಗಳೂರು ನಗರ ಸ್ಥಳೀಯ ಸಂಸ್ಥೆಯ ಸ್ಕೌಟ್ಸ್-ಗೈಡ್ಸ್ ರ‍್ಯಾಲಿ ಕಬ್, ಬುಲ್‌ಬುಲ್ ಉತ್ಸವ :

ಮಂಗಳೂರು ನಗರ ಸ್ಥಳೀಯ ಸಂಸ್ಥೆಯ ಸ್ಕೌಟ್ಸ್-ಗೈಡ್ಸ್ ರ‍್ಯಾಲಿ ಕಬ್ಸ್-ಬುಲ್‌ಬುಲ್ ಉತ್ಸವವನ್ನು ದಿನಾಂಕ 12-01-12007 ರಿಂದ 13-10-2007ರವರೆಗೆ ಜಿಲ್ಲಾ ಸ್ಕೌಟ್ಸ್-ಗೈಡ್ಸ್ ತರಬೇತಿ ಕೇಂದ್ರ ಪಿಲಿಕುಳ, ಮಂಗಳೂರು ಇಲ್ಲಿ ಸಂಘಟಿಸಲಾಯಿತು. ಮಂಗಳೂರು ನಗರ ಸ್ಥಳೀಯ ಸಂಸ್ಥೆಯ ಅಧ್ಯಕ್ಷ ಶ್ರೀ ಹರ್ಷಕುಮಾರ್ ಮಾಲೀಕರು ಪ್ರಮೋದ್ ಆಟೋಮೊಬೈಲ್, ಮಂಗಳೂರು ಇವರ ಅಧ್ಯಕ್ಷತೆಯಲ್ಲಿ ಉದ್ಘಾಟನಾ ಸಮಾರಂಭ ನಡೆಯಿತು. ಶ್ರೀಮತಿ ಐರಿನ್ ಡಿಕುನ್ಹ, ಜಿಲ್ಲಾ ಆಯುಕ್ತರು (ಗೈಡ್ಸ್) ಶಿಬಿರವನ್ನು ಉದ್ಘಾಟಿಸಿದರು. ಸೈಂಟ್ ತೆರೆಸಾ ಪ್ರೌಢಶಾಲೆಯ ಮುಖ್ಯೋಪಾಧ್ಯಾಯಿನಿ ಎಸ್. ರೋಸ್ ಮೇರಿ ಇವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದರು. ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಪ್ರತೀಮ್ ಕುಮಾರ್ ಸ್ವಾಗತಿಸಿದರು. ಶ್ರೀ ಎಂ. ಪ್ರಭಾಕರ್ ಭಟ್, ರ‍್ಯಾಲಿ ನಿರ್ದೇಶಕರು ಶಿಬಿರದ ಮುನ್ನೋಟ ನೀಡಿದರು. ಶ್ರೀ ಮಾಧವ, ಸ್ಕೌಟರ್ ವಂದಿಸಿದರು.

ಶಿಬಿರದ ಸಮಾರೋಪ ಸಮಾರಂಭ ಜಿಲ್ಲಾ ಮುಖ್ಯ ಆಯುಕ್ತರು ಶ್ರೀ ಐ.ಎ. ಕೈರನ್ನರವರ ಅಧ್ಯಕ್ಷತೆಯಲ್ಲಿ ಜರುಗಿತು. ಶ್ರೀ ವಾಸುದೇವ ಬೋಳೂರು, ಶ್ರೀಮತಿ ಐರಿನ್ ಡಿಕುನ್ಹಿ, ಜಿಲ್ಲಾ ಆಯುಕ್ತರು (ಗೈಡ್ಸ್), ಶ್ರೀಮತಿ ಜೋಯ್ಸ್ ಅಲ್ಬುಕರ್ಕ್, ಶ್ರೀ ಎಂ.ಜಿ. ಕಜೆ ಇವರುಗಳು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಶ್ರೀಮತಿ ಸುಫಲ ಸ್ವಾಗತಿಸಿದರು. ಶ್ರೀನಿವಾಸ್ ಇವರು ವಂದಿಸಿದರು. ಮಂಗಳೂರು ನಗರದ ವಿವಿಧ ಶಾಲೆಗಳಿಂದ 300 ಸ್ಕೌಟ್ಸ್-ಗೈಡ್ಸ್, ಕಬ್ಸ್, ಬುಲ್‌ಬುಲ್ಸ್‌ಗಳು ಭಾಗವಹಿಸಿದ್ದರು.

**ರಾಷ್ಟ್ರೀಯ ಯುವ ದಿನಾಚರಣೆ ಮತ್ತು ರೋವರ್ಸ್-ರೇಂಜರ್ಸ್‌ಗಳಿಗೆ ಪದಕಾರ್ಜುನ ತರಬೇತಿ ಶಿಬಿರ :** ರಾಷ್ಟ್ರೀಯ ಯುವ ದಿನಾಚರಣೆಯ ಅಂಗವಾಗಿ ದಕ್ಷಿಣಕನ್ನಡ ಜಿಲ್ಲಾ ರೋವರ್-ರೇಂಜರ್ಸ್‌ಗಳಿಗೆ ದಿನಾಂಕ 13-1-2007 ರಿಂದ 15-1-2007ರ ವರೆಗೆ ವಿವಿಧ ಕಾರ್ಯಕ್ರಮಗಳ ಪದಕಾರ್ಜುನ ತರಬೇತಿಯನ್ನು ಮತ್ತು ಪ್ರಬಂಧ ಸ್ಪರ್ಧೆ ಹಾಗೂ ಪೈಟಿಂಗ್ ಸ್ಪರ್ಧೆಯನ್ನು ಜಿಲ್ಲಾ ಸ್ಕೌಟ್-ಗೈಡ್ಸ್ ತರಬೇತಿ ಕೇಂದ್ರ, ಪಿಲಿಕುಳ, ವಾಮಂಜೂರು ಇಲ್ಲಿ ಸಂಘಟಿಸಲಾಯಿತು. ಶಿಬಿರದ ಉದ್ಘಾಟನೆಯನ್ನು ಶ್ರೀ ವಾಸುದೇವ ಬೋಳೂರು ಎ.ಡಿ.ಸಿ.ರವರು ನೆರವೇರಿಸಿದರು.

ಶ್ರೀ ಐ.ಎ. ಕೈರನ್ನ, ಜಿಲ್ಲಾ ಮುಖ್ಯ ಆಯುಕ್ತರು, ಅಧ್ಯಕ್ಷತೆ ವಹಿಸಿದ್ದರು. ಶ್ರೀಮತಿ ಐರಿನ್ ಡಿಕುನ್ಹ ಅತಿಥಿಗಳಾಗಿ ಮಾತನಾಡಿದರು. ಶ್ರೀ ಎಚ್. ಮಾಧವ ಭಟ್ ಪ್ರಾಸ್ತಾವಿಕ ಮಾತುಗಳ- ನ್ನಾಡಿದರು. ಶ್ರೀ ಪ್ರತಿಮ್‌ಕುಮಾರ್, ರೋವರ್ ಲೀಡರ್, ಮಧುಸೂದನ್ ಕುಶೆ ಪದವಿ ಪೂರ್ವ ಕಾಲೇಜು ಇವರು ಶಿಬಿರದ ನಾಯಕರಾಗಿದ್ದು ಶಿಬಿರದ ಮುನ್ನೋಟ ನೀಡಿದರು.

ಶ್ರೀ ಗುರುಮೂರ್ತಿ ಎ.ಎಲ್.ಟಿ. (ಸ್ಕೌಟ್), ಶ್ರೀ ಗೋಪಾಲ ಕೃಷ್ಣ ಭಟ್, ಎಲ್.ಟಿ. (ಸ್ಕೌಟ್), ಪ್ರಭಾಕರ್ ಭಟ್, ಎಲ್.ಟಿ. (ಸ್ಕೌಟ್), ಶ್ರೀ ಸಂಜೀವ ಎಚ್.ಡಬ್ಲ್ಯೂ.ಬಿ. (ಸ್ಕೌಟ್), ಶ್ರೀ ಪ್ರತಿಮ್ ಕುಮಾರ್, ಎ.ಎಲ್.ಟಿ.(ಸ್ಕೌಟ್) ಇವರು ಬೋಧಕರಾಗಿ ಭಾಗವಹಿಸಿದರು. ಎಸ್.ಡಿ.ಎಂ. ಕಾಲೇಜ್, ಉಜಿರೆ, ಎಸ್.ಡಿ.ಎಂ.ಐ.ಟಿ.ಐ. ವೇಣೂರು, ಎಂ.ಆರ್. ಪೂಂಜ ಐ.ಟಿ.ಐ. ಮುಲ್ಕಿ, ಪಿ.ಎ. ಪ್ರಥಮ ದರ್ಜೆ ಕಾಲೇಜ್ ಪುತ್ತೂರು, ಮುಂಜಾಡೆ ಪದವಿ ಪೂರ್ವಕಾಲೇಜಿನಿಂದ ರೋವರ್, ರೇಂಜರ್ ಲೀಡರ್ ಹಾಗೂ ನೆಹರೂ ಮೆಮೋರಿಯಲ್ ಕಾಲೇಜು ಸುಳ್ಯ ಇಲ್ಲಿಯ ರೇಂಜರ್ಸ್ ಹಾಗೂ ರೋವರ್ ಲೀಡರ್ಸ್ ಒಟ್ಟು 50 ರೇಂಜರ್ಸ್, 36 ರೋವರ್ಸ್‌ಗಳು ಭಾಗವಹಿಸಿದ್ದರು.

**ಸ್ಕೌಟ್ಸ್ ಶತಮಾನೋತ್ಸವ ಆಚರಣೆ-2007 ದಕ್ಷಿಣ ಕನ್ನಡ ಜಿಲ್ಲಾ ಸ್ಕೌಟ್ಸ್-ಗೈಡ್ಸ್ ರ್‍ಯಾಲಿ :** ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ದಕ್ಷಿಣ ಕನ್ನಡ ಜಿಲ್ಲಾ ಸ್ಕೌಟ್ಸ್-ಗೈಡ್ಸ್ ರ್‍ಯಾಲಿಯನ್ನು ಸ್ಕೌಟ್ಸ್ ಶತಮಾನೋತ್ಸವ ವರ್ಷಾಚರಣೆಯ ಅಂಗವಾಗಿ ದಿನಾಂಕ 27-12-2006 ರಿಂದ 28-12-2006ರ ವರೆಗೆ ಜಿಲ್ಲಾ ಸ್ಕೌಟ್ಸ್-ಗೈಡ್ಸ್ ತರಬೇತಿ ಕೇಂದ್ರ ಪಿಲಿಕುಳ ಮಂಗಳೂರು ಇಲ್ಲಿ ಸಂಘಟಿಸಲಾಯಿತು. ಕರ್ನಾಟಕ ಲೋಕಾಯುಕ್ತ ನ್ಯಾಯಮೂರ್ತಿ ಶ್ರೀ ಸಂತೋಷ್ ಹೆಗ್ಡೆ, ಜಿಲ್ಲಾ ಸ್ಕೌಟ್ಸ್-ಗೈಡ್ಸ್ ರ್‍ಯಾಲಿಯನ್ನು ದೀಪ ಬೆಳಗಿಸಿ ಉದ್ಘಾಟಿಸಿದರು. ಅವರು ತಮ್ಮ ಉದ್ಘಾಟನಾ ಭಾಷಣದಲ್ಲಿ ಜನರಲ್ಲಿ ಮೌಲ್ಯಗಳನ್ನು ಬೆಳೆಸಬೇಕಾದರೆ ಮಕ್ಕಳಲ್ಲಿ ಮೌಲ್ಯದ ಅರಿವು ಮೂಡಬೇಕು. ಸ್ಕೌಟ್ಸ್-ಗೈಡ್ಸ್ ಈ ಕೆಲಸ ಮಾಡುತ್ತಿದೆ ಎಂದರು. ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷ ಶ್ರೀ ಕುಡ್ಪಿ ಜಗದೀಶ್ ಶೆಣೈ, ಅಧ್ಯಕ್ಷತೆ ವಹಿಸಿದ್ದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಐ.ಎ. ಕೈರನ್ನ ಸ್ವಾಗತಿಸಿದರು. ಕೋಶಾಧಿಕಾರಿ ರೆ॥ ಎಡ್ವಿನ್ ವಾಲ್ಟರ್ ಧನ್ಯವಾದ ಸಲ್ಲಿಸಿದರು. ರ್‍ಯಾಲಿ ನಿರ್ದೇಶಕ ಶ್ರೀಯುತ ಯು. ಗೋಪಾಲಕೃಷ್ಣ ಭಟ್ ಶಿಬಿರದ ಮುನ್ನೋಟ ನೀಡಿದರು. ಜಿಲ್ಲಾ ಗೈಡ್ಸ್ ಆಯುಕ್ತರಾದ ಶ್ರೀಮತಿ ಐರನ್ ಡಿಕುನ್ಹ, ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಎನ್.ಜಿ. ಮೋಹನ್, ಶ್ರೀಮತಿ ಲಕ್ಷ್ಮೀ ಆರೂರ್, ಶ್ರೀಮತಿ ಶಾರದ ಆಚಾರ್, ಶ್ರೀ ಆಲಿವರ್ ಅಂತೆಂಟ್, ಶ್ರೀಮತಿ ಜೋಯ್ಸ್ ಅಲ್ಬುಕರ್ಕ್ ವೇದಿಕೆಯಲ್ಲಿ ಉಪಸ್ಥಿತರಿದ್ದರು. ಶ್ರೀ ಎಂ.ಜಿ. ಕಜೆ ಕಾರ್ಯಕ್ರಮ ನಿರ್ವಹಿಸಿದರು. ಇದೇ ಸಂದರ್ಭದಲ್ಲಿ ಬಾಳಿಲ ಪ್ರೌಢಶಾಲೆಯ ಶ್ರೀ ರವೀಂದ್ರನಾಥ್, ಬೆಳ್ವಾಯಿ ಪ್ರೌಢಶಾಲೆಯ ಸ್ಕೌಟರ್ ಶ್ರೀ ದೇವ್ ದಾಸ್ ಕಿಣಿ, ಶ್ರೀ ವೆಲೆರಿಯನ್ ಮೊಂತೇರೋ ಇವರಿಗೆ

ಹಿಮಾಲಯನ್ ವುಡ್ ಬ್ಯಾಡ್ಜ್ ಪದಕ ಪ್ರದಾನ ಮಾಡಲಾಯಿತು. ರಾತ್ರಿ ನಡೆದ ಭವ್ಯ ಶಿಬಿರಾಗ್ನಿ ಕಾರ್ಯಕ್ರಮವನ್ನು ಮೂಡುಶೆಟ್ಟಿ ಗ್ರಾಮ ಪಂಚಾಯತ್ ಅಧ್ಯಕ್ಷ ಶ್ರೀ ಶಿವರಾಮ ಮಲ್ಲಿ ಉದ್ಘಾಟಿಸಿದರು.

ದಿನಾಂಕ 28-12-2006 ರಂದು ರ್‍ಯಾಲಿಯ ಸಮಾರೋಪ ಸಮಾರಂಭ ಶ್ರೀ ಎಸ್. ವಿನಯ್ ಹೆಗ್ಡೆ, ಅಧ್ಯಕ್ಷರು, ನಿಟ್ಟೆ ಎಜುಕೇಷನ್ ಟ್ರಸ್ಟ್‌ರವರ ಅಧ್ಯಕ್ಷತೆಯಲ್ಲಿ ಜರುಗಿತು. ಶ್ರೀ ಬಿ. ಸಾಂಬಮೂರ್ತಿ, ಅಧ್ಯಕ್ಷರು ಮತ್ತು ಕಾರ್ಯ ನಿರ್ವಹಾಹಕ ನಿರ್ದೇಶಕರು ಕಾರ್ಪೋರೇಷನ್ ಬ್ಯಾಂಕ್, ಶ್ರೀ ಬ್ಲೇಸಿಯಸ್ ಎ. ಡಿಸೋಜ ಇವರುಗಳು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಶ್ರೀಮತಿಯರಾದ ಹೇಮಲತಾ ಶೆಟ್ಟಿ, ಮೇಬಲ್ ಸುಫಲ ಸಾಲಿಯಾನ್, ಅಸುಂತ, ಇವರುಗಳಿಗೆ ಎಚ್.ಡಬ್ಲ್ಯೂ.ಬಿ ಪದಕ ಪ್ರಧಾನ ಮಾಡಲಾಯಿತು.

## ಬಾಗಲಕೋಟೆ ಜಿಲ್ಲೆ

ಬಾಗಲಕೋಟೆ ತಾಲೂಕು ಸ್ಕೌಟರ್ಸ್ ಮತ್ತು ಗೈಡರ್ಸ್‌ಗಳ ಸಮಾವೇಶ ಜಿಲ್ಲಾ ಕಾರ್ಯಾಲಯದಲ್ಲಿ ನಡೆಯಿತು. ತಾಲೂಕು ಸಂಸ್ಥೆಯ ಅಧ್ಯಕ್ಷರಾದ ಶ್ರೀ ಬಾಬು ನಿಡಗುಂದಿ ಅಧ್ಯಕ್ಷತೆ ವಹಿಸಿದ್ದರು. ದೈಹಿಕ ಶಿಕ್ಷಣ ಸಂಯೋಜಕರಾದ ಶ್ರೀ ಎಂ.ಎಂ. ಹೇನವಾಡ ಅತಿಥಿಗಳಾಗಿ ಆಗಮಿಸಿದ್ದರು.

ಸಮಾವೇಶದಲ್ಲಿ ಜಿಲ್ಲಾ ಸ್ಕೌಟ್ಸ್ ಆಯುಕ್ತರಾದ ಶ್ರೀ ಜಿ.ಬಿ. ಇದ್ದಲಗಿ ಹಾಗೂ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಸಿ.ಪಿ. ಸಾವಳಗಿ ಉಪಸ್ಥಿತರಿದ್ದರು. ಡಿ.ಓ.ಸಿ.ಗಳಾದ ಶ್ರೀ ಸಿ.ವಿ. ಸಣ್ಣಪ್ಪನವರ ಶ್ರೀಮತಿ ಪಿ.ಜಿ. ಬಂದೀಕೇರಿ ಸಮಾವೇಶವನ್ನು ನಡೆಸಿಕೊಟ್ಟರು.

ಬಾದಾಮಿ ಸ್ಥಳೀಯ ಸಂಸ್ಥೆಯ ಮಟ್ಟದ ಸ್ಕೌಟರ್ಸ್ ಮತ್ತು ಗೈಡರ್ಸ್‌ಗಳ ಸಮಾವೇಶವನ್ನು ಶಿಕ್ಷಕರ ಸೊಸೈಟಿ ಹಾಲ್‌ನಲ್ಲಿ ನಡೆಸಲಾಯಿತು. 60 ಜನ ಸ್ಕೌಟರ್ಸ್ ಹಾಗೂ ಗೈಡರ್ಸ್‌ಗಳ ಭಾಗವಹಿಸಿದ್ದರು. ದೈಹಿಕ ಶಿಕ್ಷಣ ಸಂಯೋಜಕರಾದ ಶ್ರೀ ಕೆ.ಪಿ. ಅರಿಷಿಣಗೋಡಿ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು. ಸಮಾವೇಶದಲ್ಲಿ ಕಾರ್ಯದರ್ಶಿಗಳಾದ ಶ್ರೀ ಬಿ.ಎ. ಕೆರೂರ, ಶ್ರೀ ಎನ್.ಎಂ. ಹೆಳವರ. ಶ್ರೀ ಆರ್.ಎಂ. ಸಾರವಾಡ ಉಪಸ್ಥಿತರಿದ್ದರು.

**ಹುನಗುಂದ :** ಹುನಗುಂದ ಸ್ಥಳಿಯ ಸಂಸ್ಥೆಯವರು ತಾಲೂಕಿನ ಸ್ಕೌಟರ್ಸ್ ಮತ್ತು ಗೈಡರ್ಸ್‌ಗಳ ಸಮಾವೇಶವನ್ನು ಕೇಂದ್ರ ಶಾಲೆ ಹುನಗುಂದದಲ್ಲಿ ನಡೆಸಿಕೊಟ್ಟರು. ಸಂಸ್ಥೆಯ ಪದಾಧಿಕಾರಿಗಳಾದ ಶ್ರೀ ಎಂ.ಎಂ. ಆವಾರಿ, ಅಧ್ಯಕ್ಷತೆ ವಹಿಸಿ ಕಾರ್ಯಕ್ರಮವನ್ನು ಉದ್ಘಾಟಿಸಿದರು. ದೈಹಿಕ ಶಿಕ್ಷಣ ಸಂಯೋಜಕರಾದ ಶ್ರೀ ಹೊಸಳ್ಳಿ ಹಾಗೂ ಮುಖ್ಯ ಗುರುಗಳಾದ ಶ್ರೀ ಲಮಾಣಿ ಅತಿಥಿಗಳಾಗಿ ಆಗಮಿಸಿದ್ದರು.

**ಬೀಳಗಿ :** ಬೀಳಗಿ ತಾಲೂಕು ಸ್ಕೌಟರ್ಸ್ ಮತ್ತು ಗೈಡರ್ಸ್‌ಗಳ ಸಮಾವೇಶವನ್ನು ಸ್ವಾಮಿ ವಿವೇಕಾನಂದ ಶಿಕ್ಷಣ ಸಂಸ್ಥೆಯಲ್ಲಿ ಹಮ್ಮಿಕೊಳ್ಳಲಾಗಿತ್ತು. ಸಂಸ್ಥೆಯ ಅಧ್ಯಕ್ಷರಾದ ಶ್ರೀ ಎಂ.ಎಸ್. ಪಾಟೀಲ ಕಾರ್ಯಕ್ರಮ ಉದ್ಘಾಟಿಸಿದರು. ಶ್ರೀ ಗೋಕಾಕ್ ತರಬೇತಿ ಆಯುಕ್ತರು ಅತಿಥಿಗಳಾಗಿ ಆಗಮಿಸಿದ್ದರು. ಶ್ರೀ ಎಸ್.ಎಸ್. ನಿಂಬಾಳ ಸಂಪನ್ಮೂಲ ವ್ಯಕ್ತಿಗಳಾಗಿ ಮಾಹಿತಿ ನೀಡಿದರು.

**ಮುಖ್ಯ ಗುರುಗಳಿಗೆ ಸಾಮಾನ್ಯ ಮಾಹಿತಿ - ಶಿಬಿರ ಜಮಖಂಡಿ :** ಜಮಖಂಡಿ ಸ್ಥಳೀಯ ಸಂಸ್ಥೆಯವರು ದಿನಾಂಕ 19-12-2006 ರಂದು ಶ್ರೀ ಬಸವೇಶ್ವರ ಪದವಿ ಪೂರ್ವ ಕಾಲೇಜು, ಕಡಪಟ್ಟಿ ಸಭಾ ಭವನದಲ್ಲಿ ಮುಖ್ಯ ಗುರುಗಳಿಗೆ ಸ್ಕೌಟಿಂಗ್ ಸಾಮಾನ್ಯ ಮಾಹಿತಿ ಶಿಬಿರವನ್ನು ನಡೆಸಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಬಳಬಟ್ಟಿ ವಹಿಸಿ ಸ್ಕೌಟ್ ಚಟುವಟಿಕೆಗಳನ್ನು ಪ್ರತಿ ಶಾಲೆಯಲ್ಲಿ ನಡೆಸಲು ಹೇಳಿದರು. ಉದ್ಘಾಟನೆಯನ್ನು ಶ್ರೀ ಜಿ.ಪಿ. ಮಠದ ನೆರವೇರಿಸಿದರು. ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು. ಜಿಲ್ಲಾ

ದೈಹಿಕ ಶಿಕ್ಷಣ ಅಧೀಕ್ಷಕರಾದ ಶ್ರೀ ಜಕಾಟಿಯವರು ಹಾಜರಿದ್ದರು. ರಾಜ್ಯ ಸಂಪನ್ಮೂಲ ವ್ಯಕ್ತಿಗಳಾದ ಶ್ರೀ ಎಂ.ಎಂ. ಲೋಂಡೆ, ಎಲ್.ಟಿ., ಹಾಗೂ ಶ್ರೀ ಜಿ.ವಿ. ನರಗುಂದ, ಎಲ್.ಟಿ. (ಸ್ಕೌ) ಇವರು ಆಗಮಿಸಿ ಸ್ಕೌಟಿಂಗ್ ವಿಷಯವಾಗಿ ಸಮಗ್ರ ಮಾಹಿತಿಯನ್ನು ನೀಡಿದರು. ಶಿಬಿರದಲ್ಲಿ 250 ಜನ ಮುಖ್ಯ ಗುರುಗಳು ಹಾಗೂ 60 ಜನ ಸ್ಕೌಟರ್ಸ್ ಮತ್ತು ಗೈಡರ್ಸ್‌ಗಳು ಭಾಗವಹಿಸಿದ್ದರು.

### ಚಿಕ್ಕಮಗಳೂರು ಜಿಲ್ಲೆ

**ರಾಷ್ಟ್ರೀಯ ಯುವದಿನ ಆಚರಣೆ :** ಸ್ವಾಮಿ ವಿವೇಕಾನಂದರ ಜೀವನ, ಅವರ ವಿಚಾರಧಾರೆ, ಯುವಜನರು ಮತ್ತು ರಾಷ್ಟ್ರ ಪ್ರೇಮದ ಬಗ್ಗೆ ಅವರ ಚಿಂತನೆ, ನಮ್ಮೆಲ್ಲರಿಗೂ ಅದರಲ್ಲೂ ಮುಖ್ಯವಾಗಿ ಯುವ ಪೀಳಿಗೆಗೆ ಒಂದು ದಿವ್ಯ ಸಂದೇಶವಾಗಿದ್ದು, ಅವುಗಳ ಅನುಷ್ಠಾನ ಮತ್ತು ಆಚರಣೆಗೆ ನಾವೆಲ್ಲರೂ ಪಣ ತೊಡಬೇಕು ಎಂದು ಸಾಮಾಜಿಕ ಕಾರ್ಯಕರ್ತ ಶ್ರೀ ಎಂ.ಕೆ. ಮಹಾಬಲೇಶ್ವರ ನುಡಿದರು. ಅವರು ಉಪ್ಪಳ್ಳಿಯ ಮಾಡೆಲ್ ಆಂಗ್ಲ ಮಾಧ್ಯಮ ಪ್ರೌಢಶಾಲೆಯ ಕಿಪ್ಲಿಂಗ್ ಸ್ಕೌಟ್ ಮತ್ತು ಗೈಡ್ ದಳಗಳ ವತಿಯಿಂದ ಏರ್ಪಡಿಸಲಾಗಿದ್ದ ಯುವ ದಿನಾಚರಣೆ ಹಾಗೂ ಸ್ವಾಮಿ ವಿವೇಕಾನಂದರ ಜನ್ಮ ದಿನಾಚರಣೆ ಸಮಾರಂಭದ ಮುಖ್ಯ ಅತಿಥಿಯಾಗಿ ಮಾತನಾಡುತ್ತಿದ್ದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಶಾಲಾ ಪ್ರಾಂಶುಪಾಲ ಶ್ರೀ ಎಂ.ಎನ್. ಷಡಕ್ಷರಿ ಮಾತನಾಡಿ, ತಾಯ್ನಾಡಿನ ಪ್ರೀತಿಯನ್ನು ಜಾಗೃತ ಗೊಳಿಸಿದ ಸ್ವಾಮೀಜಿಯವರ ಜೀವನ ಯುವ ಜನರಿಗೆ ಆದರ್ಶವಾಗಬೇಕು ಎಂದು, ಮಹಾತ್ಮರ ಜೀವನ ಚರಿತ್ರೆಗಳ ಅಧ್ಯಯನದಿಂದ ನಮ್ಮಲ್ಲಿ ಉದಾತ್ತ ಗುಣಗಳು ಅಂಕುರಿಸಲು ಸಾಧ್ಯ ಎಂದರು. ಮುಖ್ಯ ಶಿಕ್ಷಕ ಶ್ರೀ ಎಸ್.ಎಂ. ಮಲ್ಲೇಶಪ್ಪ ಪ್ರಾಸ್ತಾವಿಕ ಭಾಷಣ ಮಾಡಿದರು. ಮುಖ್ಯ ಶಿಕ್ಷಕರು ಶ್ರೀ ವಿಶಾಲ ಹಾಜರಿದ್ದರು. ಶ್ರೀಮತಿ ಜಾಹಿರಾ ಫಾತೀಮಾ ಸ್ವಾಗತಿಸಿ, ಶ್ರೀ ಯತೀಶ್ ವಂದಿಸಿದರು.

### ಹಾಸನ ಜಿಲ್ಲೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಹಾಸನ ತಾಲ್ಲೋಕ್ ಸ್ಥಳೀಯ ಸಂಸ್ಥೆಯ ವತಿಯಿಂದ ದಿನಾಂಕ 20-1-2007 ರಿಂದ 21-1-2007 ರವರೆಗೆ ಹಾಸನ ಜಿಲ್ಲಾ ತಾಲ್ಲೋಕ್ ದೊಡ್ಡಗದ್ದವಳ್ಳಿ ಸರ್ಕಾರಿ ಪ್ರೌಢಶಾಲೆಯಲ್ಲಿ ಸ್ಕೌಟ್ಸ್ - ಗೈಡ್ಸ್‌ಗಳ ತಾಲ್ಲೋಕ್ ಮಟ್ಟದ ದ್ವಿತೀಯ ಸೋಪಾನ ತರಬೇತಿ ಶಿಬಿರವನ್ನು ಏರ್ಪಡಿಸಲಾಗಿತ್ತು.

ಈ ತರಬೇತಿ ಶಿಬಿರದಲ್ಲಿ ತಾಲ್ಲೋಕಿನಾದ್ಯಂತ 80 ಸ್ಕೌಟ್ಸ್ ಹಾಗೂ 75 ಗೈಡ್ಸ್‌ಗಳು ಭಾಗವಹಿಸಿದ್ದರು. ಶಿಬಿರದ ನಾಯಕತ್ವವನ್ನು ಶ್ರೀ ಎಂ.ಎಸ್. ಪ್ರಕಾಶ್, ಜಿಲ್ಲಾ ಕಾರ್ಯದರ್ಶಿ, ಇವರು ವಹಿಸಿದ್ದರು. ಶಿಬಿರದ ಉದ್ಘಾಟನೆಯನ್ನು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಹಾಗೂ ನಿವೃತ್ತ ತಹಶೀಲ್ದಾರ್‌ರವರಾದ ಶ್ರೀ ನಿರ್ವಾಣಪ್ಪರವರು ನೆರವೇರಿಸಿದರು. ಜಿಲ್ಲಾ ಸ್ಕೌಟ್ಸ್ ಆಯುಕ್ತರು ಆದ ಡಾ|| ವೈ.ಎಸ್. ವೀರಭದ್ರಪ್ಪರವರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಮೋಹನ್‌ರಾಜ್, ಸಹಾಯಕ ಜಿಲ್ಲಾ ಆಯುಕ್ತರು (ಸ್ಕೌಟ್) ಹಾಸನ. ಶ್ರೀ ಕೆ. ಧನಂಜಯ್, ವೈದ್ಯಾಧಿಕಾರಿಗಳು, ದೊಡ್ಡಗದ್ದವಳ್ಳಿ, ಆಯುರ್ವೇದ ಆಸ್ಪತ್ರೆ, ಶಿಬಿರದ ಯಶಸ್ವಿಗೆ ಶುಭ ಹಾರೈಸಿದರು.

ಶಿಬಿರದ ಮುಕ್ತಾಯ ಸಮಾರಂಭವು ದಿನಾಂಕ 21-1-2007 ರಂದು 3 ಗಂಟೆಗೆ ನಡೆಯಿತು. ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಡಿ.ಎನ್. ಪ್ರಕಾಶ್, ಸ್ಕೌಟ್ಸ್ ಶಿಕ್ಷಕರು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ದೊಡ್ಡಗದ್ದವಳ್ಳಿ ಇವರು ವಹಿಸಿದ್ದರು. ಸಮಾರೋಪ

ಭಾಷಣವನ್ನು ಶ್ರೀ ರುದ್ರೇಶ್. ಸರ್ಕಾರಿ ಪ್ರೌಢಶಾಲೆಯ ಮುಖ್ಯಸ್ಥರು ಮಾಡಿದರು. ಶ್ರೀ ಎಲ್.ಟಿ. ಲೋಕೇಶ್, ರಾಜ್ಯ ಸಹ ಸಂಘಟನಾ ಆಯುಕ್ತರು ಉಪಸ್ಥಿತರಿದ್ದರು ಶಿಬಿರದಲ್ಲಿ ವಿವಿಧ ತರಬೇತಿ ನೀಡಿ, ಸ್ಕೌಟಿಂಗ್‌ನ ಶತಮಾನೋತ್ಸವ ಕಾರ್ಯಕ್ರಮಗಳ ಬಗ್ಗೆ ಮಾಹಿತಿ ನೀಡಿದರು. ಶ್ರೀ ಎಂ.ಎಸ್. ಪ್ರಕಾಶ್, ಜಿಲ್ಲಾ ಕಾರ್ಯದರ್ಶಿ, ಶಿಬಿರದ ವರದಿ ನೀಡಿದರು.

## ದಾವಣಗೆರೆ ಜಿಲ್ಲೆ

ದಾವಣಗೆರೆಯ ಸರ್ಕಾರಿ ಪ್ರೌಢಶಾಲೆ ಕೆ.ಆರ್. ಮಾರ್ಕೆಟ್‌ನ ಸ್ವಾಮಿವಿವೇಕಾನಂದ ಸ್ಕೌಟ್ಸ್ ಟ್ರೂಪ್ ವತಿಯಿಂದ "ಸ್ವಾಮಿ ವಿವೇಕಾನಂದರ" 144ನೇ ಜನ್ಮ ದಿನಾಚರಣೆಯುನ್ನು ಮತ್ತು ಸ್ಕೌಟ್ಸ್‌ಗಳಿಗೆ ದೀಕ್ಷಾ ಸಮಾರಂಭವನ್ನು ದಿನಾಂಕ 12-01-2007ರ ಶುಕ್ರವಾದ ಆಚರಿಸಲಾಯಿತು. ಇದೇ ಸಂದರ್ಭದಲ್ಲಿ ಶಿಕ್ಷಕಿ ಶ್ರೀಮತಿ ಪುಷ್ಪಮಜ್ಜಗಿ ಮಾತನಾಡುತ್ತಾ ವಿವೇಕಾನಂದರ ಸಂಕ್ಷಿಪ್ತ ಪರಿಚಯದೊಂದಿಗೆ ಅವರ ಬಾಲ್ಯಜೀವನದ ತುಂಟಾಟಗಳನ್ನು ಎಳೆ ಎಳೆಯಾಗಿ ತಿಳಿಸಿದರು.

ಅಧ್ಯಕ್ಷತೆಯನ್ನು ಶಾಲಾ ಮುಖ್ಯೋಪಾಧ್ಯಾಯರಾದ ಶ್ರೀ ಎಸ್.ಕೆ. ಭೀಮರಾಜ್‌ರವರು ವಹಿಸಿ ಮಾತನಾಡುತ್ತಾ ನರೇಂದ್ರರ ತಂದೆ-ತಾಯಿ ಹಾಗೂ ಗುರು ರಾಮಕೃಷ್ಣ ಪರಮಹಂಸರ ವಿಚಾರವನ್ನು ತಿಳಿಸಿದರು.

## BANGALORE SOUTH

29 Rover Scouts of HAL Rover Crew under the leadership of Sri. P. Nanda Kumar, Rover Scout Leader, had their Annual Camp 2006 at Kiltan Island, Union Territory of Lakshadweep from 12th to 25th December 2006.

The Camp was inaugurated by Sri Nizamuddin Koya, Assistant Sub Divisional officer, Kiltan Island on 13th December 2006. The camp was sponsored by the Reef Arts and Sports Club, Kiltan Island.

The Rovers had high experience in deep sea fishing, Coral viewing under shallow waters. The rovers also experienced night out camp and slept beside the roaring sea. The Rovers hosted a dinner for the localities of the Island. The Islander also hosted a lunch for the Rovers (Traditional food of the island).

The Rajiv Gandhi Foundation hosted a High tea in their premises Mr. Abdul Ghani also visited the Karvatti Island and had the experiem of High Sea Voyage. The Rovers have spilled the beans of the culture and tradition of Karnataka in the Hearts of the People of the island.

## BANGALORE NORTH

Sri Chamundi Scout Group Celebrated its 88th Group Day on 2nd December 2006, Mr. Chiranjeevi Singh, IAS(R) Mr. Devaprakash, D.D.P.I. and our District Chief Commissioner, Mr. Premkumar, District Commssioner (S), Smt. Sheila Premkumar, A.D.C (G), blessed the Group with their presence.

On this day Group recognized many of the localites who are rendering Sincere and Honest Service in their own Fields and Honoured them with Medal and Citation. Mr. Chiranjeevi Singh, former Additioinal Chief Secretary & Development

Commissioner, Govt. of Karnataka and Former Ambassador to UNESCO, expressed his Appreciation for Group's Longuity, Merit and the Talents of the Children.

On 3rd December 2006, Group had the Privilege of Honouring Mr. M.K. Subbarao, Dr. Vitttal Hattiangadi former members of the Group of 1920s and Shivaprasad a Senior member of our sister Group Sri. Jaya Scout Group, Mysore.

Awards for Inter Patrol activities of (both sections). Prizes for Sports, Cultural Activities, Talents and Merit were Distributed.

There were Cultural activities. Parents numbering 125, moer than three Hundred invitees, well wishers and others withnessed the celebrations and blessed the Group.

## BANGALORE NORTH

Smt. Susheela Changappa, A.L.T.(G) was the Leader of the Basic Course for Guide Capations held at Shanthi Gruha, Bangalore recently.

Shivajinagar Local Association & Banswadi Local Association at organised Seminar for the Unit Leaders St. Joseph's Convent High School, Promenande Road, Coles Park Bangalore on 20-01-2007.

It was inaugurated by Mr. Rajendhar, General Secretary of SC & ST Association. Miss. Rathanjali, President of Local Association, Sm. S.K. Prabha, LT(G), Smt. B. Revathy, LT(B), Mr & Mrs Sampath Kumar, ADC(G) and Miss. Krupa Vijai were present.

The knowledge was given on Compass & Direction, Proficiency Badges, How to maintain Log Book, Programme Planning, First Aid, Knots of Lashing.

There were 25 unit leaders from different schools. "Shishubhavan". The Shivajinagar Local Association Office bearers visited for Handicapped children on 26th January 2007 along with few Guides. Mrs. Manjula Rahaida, Vice-President Sponsored Fruits and Biscuits.

## GONE HOME

K.G. SHANKARAPPA, Retd.

Revenue Inspector and Freedom Fighter and Former Assistant District Commissioner (Scouts) Bharat Scouts and Guides, Davanagere District, passed away on 29th January 2007 at Davanagere. He leaves behind his Wife and Three sons and Host of relatives and well wishes

MAY HIS SOUL REST IN PEACE

# ಗಮನಿಸಿ

ಸ್ಕೌಟ್ಸ್, ಗೈಡ್ಸ್ ಮತ್ತು ದಳ ನಾಯಕರುಗಳೇ

ಫೆಬ್ರವರಿ 11, 2007 ಪೋಲಿಯೊ ಲಸಿಕೆ ಹಾಕುವ
ಕಾರ್ಯಕ್ರಮದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿರಿ!!
ಸಾರ್ವಜನಿಕರಿಗೆ ಸಹಕರಿಸಿರಿ!!!

5 ವರ್ಷದೊಳಗಿನ ಮಗುವಿಗೆ ಪೋಲಿಯೊ ಹನಿಯನ್ನು
ತಪ್ಪದೇ ಕೊಡಿಸಿ



## ಜೀವನಕ್ಕಾಗಿ ಎರಡು ಹನಿಗಳು



ಪ್ರತಿಯೊಂದು ಮಗುವಿಗೂ ಪೋಲಿಯೊ ಹನಿ ಹಾಕೋಣ
ರಾಷ್ಟ್ರವನ್ನು ಪೋಲಿಯೊದಿಂದ ಮುಕ್ತಗೊಳಿಸೋಣ

ಪ್ರಕಟಣೆ :

**ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ**

ರಾಜ್ಯ ಕೇಂದ್ರ ಕಾರ್ಯಾಲಯ, ಪ್ರೊ. ಶಿವಶಂಕರ್ ವೃತ್ತ, ಕೊಂಡಜ್ಜಿ ಬಸಪ್ಪ ರಸ್ತೆ
ಕೋಟೆ, ಬೆಂಗಳೂರು-೫೬೦ ೦೦೨. ದೂರವಾಣಿ : ೨೬೭೦ ೧೨೨೭ / ೨೬೭೦೮೮೦೩

# ದಯವಿಟ್ಟು ಗಮನಿಸಿರಿ

೧. ೨೦೦೬-೨೦೦೭ನೇ ಸಾಲಿನಲ್ಲಿ ಜಿಲ್ಲೆಗಳಿಗೆ ನೀಡಿರುವ ಸ್ಕೌಟ್ಸ್ ಮತ್ತು ಗೈಡ್ಸ್ ಗಣತಿಯನ್ನು ಮಾರ್ಚ್ ೩೧ರೊಳಗಾಗಿ ಪೂರ್ಣಗೊಳಿಸಲು ರಾಜ್ಯ ಸಂಸ್ಥೆ ಕೋರಿಕೆ.

೨. ತಮ್ಮ ಕಾರ್ಯಕ್ರಮಗಳ ವರದಿಗಳು ಸಂಕ್ಷಿಪ್ತವಾಗಿರಲಿ. ಛಾಯಾ ಚಿತ್ರಗಳು ಒಂದು ಅಥವಾ ಎರಡಕ್ಕಿಂತ ಹೆಚ್ಚು ಬೇಡ. ಅವುಗಳ ವಿವರ ಸ್ಪಷ್ಟವಾಗಿರಲಿ.

೩. ಒಂದು ತಿಂಗಳಗಿಂತ ಹಳೆಯ ಸುದ್ದಿಯನ್ನು ಪ್ರಕಟಿಸಲಾಗುವುದಿಲ್ಲ.

# ಪೋಷಕರಿಗೆ ಸಂದೇಶ

ನಿಮ್ಮ ಹುಡುಗ / ಹುಡುಗಿ ಸ್ಕೌಟ್ / ಗೈಡ್ ಆಗಬೇಕು. ಏಕೆಂದರೆ,

1. ಸ್ಕೌಟ್ / ಗೈಡ್ ಶಿಕ್ಷಣವು - ನಿಮ್ಮ ಹುಡುಗ / ಹುಡುಗಿಯ ಬಿಡುವಿನ ಸಮಯವನ್ನು ಹಿತಕರ ಸಹಪಾಠಿಗಳೊಂದಿಗೆ ಆರೋಗ್ಯಕರ ಚಟುವಟಿಕೆಗಳಲ್ಲಿ ತೊಡಗಿಸುವಂತೆ ಮಾಡುತ್ತದೆ.

2. ಸ್ಕೌಟ್ / ಗೈಡ್ ಶಿಕ್ಷಣವು - ಹುಡುಗ / ಹುಡುಗಿಯರ ಯಶಸ್ಸಿಗೆ ಅಗತ್ಯವಾದ ನೈತಿಕ ಬಲವನ್ನು ನೀಡುವುದಲ್ಲದೆ ಅವರ ಯಾವುದೇ ವೃತ್ತಿಯಲ್ಲಿ ಯಶಸ್ಸನ್ನು ಕೊಡುವುದು.

3. ಸ್ಕೌಟ್ / ಗೈಡ್ - ಇದು ಸೈನಿಕ ಚಳವಳಿಯಲ್ಲ. ನಾವು ಒಳ್ಳೆಯ ನಾಗರಿಕ ವ್ಯಕ್ತಿಗಳನ್ನು ರೂಪಿಸಹೊರಟಿದ್ದೇವೆಯೇ ವಿನಃ ಅನುಕರಣೆಯ ಸಿಪಾಯಿಗಳ ಒಂದು ತಂಡವನ್ನಲ್ಲ.

4. ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಗೆ ಸೇವಾವಕಾಶಗಳನ್ನು ಕಲ್ಪಿಸಿಕೊಡುತ್ತದೆ. ದೇವರು ಮತ್ತು ನೆರೆಯವರಲ್ಲಿ ಗೌರವ ಭಾವನೆ ಇರುವುದು ಧರ್ಮದ ಮೂಲ ಎಂದು ತಿಳಿಸುತ್ತದೆ.

5. ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಯನ್ನು ಕುಶಲರನ್ನಾಗಿ ಮಾಡುತ್ತದೆ. ಅವರ ಹವ್ಯಾಸಗಳು ಮನೆಗೆ ಉಪಯುಕ್ತವಾಗುವಂತೆಯೇ ಅವರಿಗೂ ಆಸಕ್ತಿಯ ವಿಷಯಗಳಾಗುತ್ತವೆ.

6. ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಯಲ್ಲಿ ಒಂದು ಗೌರವ ಮತ್ತು ನಿಷ್ಠೆಯ ಭಾವನೆಯನ್ನು ಬೆಳೆಸುತ್ತದೆ. ಅವರು ನಿಮ್ಮನ್ನು ನಿರಾಸೆಗೊಳಿಸುವುದಿಲ್ಲ ಅಥವಾ ನಿಮಗೆ ಸುಳ್ಳು ಹೇಳುವುದಿಲ್ಲ.

7. ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಗೆ ಸ್ವಾವಲಂಬನೆಯನ್ನು ಕಲಿಸುತ್ತದೆ. ಇದರಿಂದ ಅವರು ತಮಗೆ ತಾವೇ ರಕ್ಷಣೆ ಪಡೆದು ಇತರರಿಗೂ ನೆರವಾಗಬಲ್ಲರು.

8. ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಗೆ ಆರೋಗ್ಯ ತಂದುಕೊಡುತ್ತದೆ. ಬಯಲ ವ್ಯಾಯಾಮ ಮತ್ತು ಆತ್ಮರಕ್ಷಣೆ ಮೂಲಕ ಅವರು ಸದೃಢ ದೇಹ ಮತ್ತು ಸದೃಢ ಮನಸ್ಸನ್ನು ಗಳಿಸುತ್ತಾರೆ.

9. ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಯ ಸಹಜ ಪ್ರತಿಭೆಯನ್ನು ಗುರುತಿಸುತ್ತದೆ. ಮತ್ತು ಆ ಮೂಲಕ ಅವರು ಉದ್ಯೋಗದ ಆಯ್ಕೆಯಲ್ಲಿ ಸೂಕ್ತವಾದುದನ್ನು ಆರಿಸಿಕೊಳ್ಳಲು ನೆರವಾಗುತ್ತದೆ.

10. ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಗೆ ಸಂತೋಷ ನೀಡುತ್ತದೆ. ಹರ್ಷೋತ್ಸಾಹಗಳ ಸಹವಾಸ ಮತ್ತು ನಿಸರ್ಗದ ಸುಖಾನುಭವದ ಮೂಲಕ ಅವರು ಖುಷಿಯಾಗಿರುತ್ತಾರೆ.

11. ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಯ ದೃಷ್ಟಿಕೋನವನ್ನು ವಿಶಾಲಗೊಳಿಸುತ್ತದೆ. ಹೇಗೆಂದರೆ ಪ್ರತಿಯೊಂದು ನಾಗರಿಕ ಸುಸಂಸ್ಕೃತ ದೇಶದಲ್ಲಿ ಇರುವ ಅದರ ಶಾಖೆಗಳು ಪರಸ್ಪರ ಸಂಬಂಧವಿಟ್ಟುಕೊಂಡಿವೆ.

12. ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಯನ್ನು ಯೋಗ್ಯ ವ್ಯಕಿಯನ್ನಾಗಿ ರೂಪಿಸುತ್ತದೆ. ಅವರು ನೀವು ಅಪೇಕ್ಷಿಸಿದಂತಹ ವ್ಯಕ್ತಿಗಳಾಗುತ್ತಾರೆ.



ಸ್ಕೌಟಿ ಶತಮಾನೋತ್ಸವ ಅಂಗವಾಗಿ ದಕ್ಷಿಣ ಕನ್ನಡ ಜಿಲ್ಲೆಯ ಳಿಕುಳದಲ್ಲಿ ನಡೆದ ಸ್ಕೌಟ್ಸ್-ಗೈಡ್ಸ್ ರ್‍ಯಾಲಿಯನ್ನು ಕರ್ನಾಟಕ ೋಕಾಯುಕ್ತ, ನ್ಯಾಯಮೂರ್ತಿ ಶ್ರೀ ಸಂತೋಷ್ ಹೆಗ್ಡೆಯವರು ಉದ್ಘಾಟಿಸಿ ಮಾತನಾಡುತ್ತಿರುವುದು.




ಚಾಮುಂಡಿ ಸ್ಕೌಟ್ ತಂಡದ 88ನೇ ವಾರ್ಷಿಕೋತ್ಸವದಂದು ಶ್ರೀ ಚಿರಂಜೀವಿ ಸಿಂಗ್, ಕರ್ನಾಟಕ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ (ನಿವೃತ್ತ) ಇವರು ಮಾತನಾಡುತ್ತಿರುವುದು.



ದಿನಾಂಕ 12-01-2007 ರಂದು ಜರುಗಿದ ಪಥಚಲನದಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್‌ಗಳ ಒಂದು ವಿಹಂಗಮ ನೋಟ.




ರಾಷ್ಟ್ರೀಯ ಯುವ ದಿನಾಚರಣೆ ಹಾಗೂ ಸ್ವಾಮಿ ವಿವೇಕಾನಂದರ ಜನ್ಮದಿನಾಚರಣೆಯ ಮುಕ್ತಾಯ
ಸಮಾರಂಭದಲ್ಲಿ ಅತಿಥಿಯಾಗಿ ಭಾಗವಹಿಸಿದ ಯುವಜನ ಸೇವೆ ಮತ್ತು ಕ್ರೀಡಾ ಇಲಾಖೆಯ
ಜಂಟಿ ನಿರ್ದೇಶಕರಾದ ಶ್ರೀ ವಸಂತ. ಕೆ. ಗುಡೋಡಗಿ ಸಭೆಯನ್ನುದ್ದೇಶಿಸಿ ಮಾತನಾಡುತ್ತಿರುವುದು
ಚಿತ್ರದಲ್ಲಿ ರಾಜ್ಯ ಸಂಸ್ಥೆಯ ಪದಾಧಿಕಾರಿಗಳು ಹಾಗೂ ಸ್ಕೌಟ್ಸ್-ಗೈಡ್ಸ್‌ಗಳನ್ನು ಕಾಣಬಹುದು



100 2007
A Hundred years of Promise
Scouting will celebrate its Centenary in 2007

ಕಲಿಕೆಯಿಂದ ಸೃಜನಾತ್ಮಕತೆ
ಸೃಜನಾತ್ಮಕತೆಯಿಂದ ಆಲೋಚನೆ
ಆಲೋಚನೆಯಿಂದ ಜ್ಞಾನ ಸಂಪಾದನೆಯು ನಮ್ಮನ್ನು ಘನತೆವಂತರನ್ನಾಗಿಸುತ್ತದೆ

ಡಾ|| ಎ.ಪಿ.ಜೆ. ಅಬ್ದುಲ್ ಕಲಾಂ
ಭಾರತದ ಘನತೆವೆತ್ತ ರಾಷ್ಟ್ರಪತಿಗಳು




Regd as News Paper (Magazine) No : **CPMG/KA/BGW-549/2006-08**
Permitted to Post under WPP System
Vide No.: **WPP-87** of SSP, BANGALORE WEST
Posted at: Bangalore City H.P.O. on 08-02-2007

ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ
*Karnataka Scout & Guide*
News Magazine

**If not delivered please return to :**

**EDITOR, Karnataka Scout & Guide**
State Headquarters, Prof. P. Sivashankar Circle
Kondajji Basappa Road, Fort
Bangalore - 560 002. Ph:26701227.



***Published for :*** The Bharat Scouts & Guides, Karnataka, State Headquarters, Fort, Bangalore - 560 002
by the State Secretary and Printed at : Sathyasri Printers (Pvt) Ltd., 5th Main, Chamarajpet, Bangalore - 560 018.